# ಮಾನಸ

ಜನವರಿ 2005 ತಿಂಗಳ ಪತ್ರಿಕೆ

ಮಾನಸ ತಿಂಗಳ ಪತ್ರಿಕೆ ಜನವರಿ 2005
ಸಂಪುಟ : 20 ಸಂಚಿಕೆ : 1



ವಿಳಾಸ :
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

ಸೂಚನೆ : ಸೂಚನೆ: ಬಿಡಿಪ್ರತಿ 10-00 ರೂ.
ವಾರ್ಷಿಕ ಚಂದಾ 100-00 ರೂ.
ಸಂಸ್ಥೆಗಳಿಗೆ 150-00 ರೂ.

* ಒಂದು ವಿಶೇಷಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

## ಈ ಸಂಚಿಕೆಯಲ್ಲಿ.....



**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಡಿಸೆಂಬರ್ 2-3, 1984 ರ ಮಧ್ಯರಾತ್ರಿ ನಡೆದ ಭೋಪಾಲ್ ವಿಷ ಅನಿಲದ ದುರಂತ ಇಂದು ಮುಗಿದು ಹೋದ ಕತೆಯಾಗಿದೆ. ಆದರೆ ಇದಕ್ಕೆ ಬಲಿಪಶುಗಳಾದವರ ನೋವು, ವ್ಯಥೆಗಳು ಇನ್ನೆರೆಡು ತಲೆಮಾರಿಗೂ ಮುಗಿಯದಿರುವುದು ಶೋಚನೀಯ ಪರಿಸ್ಥಿತಿಯನ್ನು ವಿವರಿಸುತ್ತದೆ. ದುರಂತ ನಡೆದು ಇಪ್ಪತ್ತು ವರುಷಗಳಾದರೂ ಸಹ, ವಿಷ ಅನಿಲದ ಸೇವನೆಯಿಂದಾಗಿ ಇಂದಿಗೂ ರಕ್ತ ಕಾರಿಕೊಳ್ಳುತ್ತ, ಕೊನೆಗೆ ಸಹಿಸಿಕೊಳ್ಳಲು ಸಾಧ್ಯವಾಗದೇ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಮಕ್ಕಳು, ಮಹಿಳೆಯರು ಇದ್ದಾರೆ. ಉಸಿರಾಟದ ತೊಂದರೆ ಅನುಭವಿಸುತ್ತಾ ಇದ್ದಕ್ಕಿದ್ದ ಹಾಗೆಯೇ ಬಿದ್ದು ಸಾಯುವವರಿದ್ದಾರೆ, ಹೊಟ್ಟೆಯಲ್ಲಿಯೇ ಸತ್ತು ಹುಟ್ಟುವ ಮಕ್ಕಳ ಸಂಖ್ಯೆ ಹೆಚ್ಚಾಗ ತೊಡಗಿದೆ, ಬಾಯಿಯಲ್ಲಿ ದೊಡ್ಡ ರಂಧ್ರವಿರುವ ಮಕ್ಕಳು, ಹೃದಯದಲ್ಲಿ ರಂಧ್ರವಿರುವ ಮಕ್ಕಳು, ಟಿ.ಬಿ. ಕಾಯಿಲೆ ಮಕ್ಕಳು, ಮಹಿಳೆಯರು ವಿಷ ಅನಿಲದ ದುರಂತಕ್ಕೆ ಒಳಗಾದ ಕುಟುಂಬಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಾರೆ.

ಹೀಗೆಯೇ ವಿಷ ಅನಿಲದಿಂದ ತೊಂದರೆಗೊಳಗಾದ ಚಂಪಾ ದೇವಿಲಾಲ್ ಶುಕ್ಲ ಹಾಗೂ ಆಕೆಯ ಸಹಪಾಠಿ ರಶೀದ್ ಬೀ ಗೆ ಗೋಲ್ಡ್ ಮ್ಯಾನ್ ಪರಿಸರ ಪ್ರಶಸ್ತಿ ನೀಡಲಾಗಿದೆ. ಇವರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿ ಭೋಪಾಲ್‌ನ ಮುಖ್ಯ ಮಂತ್ರಿಯವರ ಆಫೀಸಿಗೆ ಹಾಗೂ 1989 ರಲ್ಲಿ ಪ್ರಧಾನ ಮಂತ್ರಿಯವರನ್ನು ಭೇಟಿಯಾಗಲು ಕಾಲು ನಡಿಗೆಯಲ್ಲಿಯೇ ದೆಹಲಿಗೆ ಹೋಗಿ ಬಂದಿದ್ದಾರೆ. ಫೆಬ್ರವರಿ 2001ರಲ್ಲಿ ಅಮೇರಿಕಾದ ಮಲ್ಟಿ ನ್ಯಾಶನಲ್ ಕಂಪನಿ ಡಾವ್ ಯೂನಿಯನ್ ಕಾರ್ಬಾಯಿಡ್ ಕಂಪನಿಯನ್ನು ಭಾರತದಲ್ಲಿ ತೆಗೆದುಕೊಂಡಿದೆ. 2004, ಅಕ್ಟೋಬರ್ 17 ರಂದು ಸ್ವಿಜ್ಜರ್‌ಲ್ಯಾಂಡ್‌ನ ಡಾವ್ ಕೆಮಿಕಲ್ಸ್ ಆಫೀಸ್ ಮುಂದೆ ಚಂಪಾ ದೇವಿ ಶುಕ್ಲ ಹಾಗೂ ಅನೇಕರು ನಾಲ್ಕು ದಿನ ಧರಣಿ ಕುಳಿತು ವಿರೋಧ ವ್ಯಕ್ತ ಪಡಿಸಿದ್ದು, ಚಂಪಾದೇವಿ ಶುಕ್ಲ ಪೊರಕೆ ತೋರಿಸುತ್ತಾ ಅಧಿಕಾರಿಗೆ-ಭೋಪಾಲ್ ದುರಂತದಿಂದಾಗಿ ಕಲುಷಿತವಾದ ನೀರು, ಭೂಮಿಯನ್ನು ಸ್ವಚ್ಛಗೊಳಿಸಬೇಕು. ಇಲ್ಲದಿದ್ದರೆ ಡಾವ್ ಕಂಪನಿಯನ್ನು ಭಾರತದಿಂದ ಪೊರಕೆಯಿಂದ ಗುಡಿಸಿ, ಓಡಿಸುತ್ತೇವೆ ಎಂದು ಗುಡುಗಿರುವುದು ವಿಷ ಅನಿಲದ ದುರಂತಕ್ಕೆ ಒಳಗಾದವರ ಆಕ್ರೋಶ, ಆಕ್ರಂದನವನ್ನು ಪ್ರತಿಬಿಂಬಿಸುತ್ತದೆ.

ಈಗ ಭೂಪಾಲ್ ದುರಂತದ ಪರಿಣಾಮಗಳ ಎಲ್ಲಾ ನೈತಿಕ ಹೊಣೆಗಾರಿಕೆಯನ್ನು ಡಾವ್ ಕಂಪನಿ ಹೊರಲೇ ಬೇಕಾಗಿದೆ. ವಿಷ ಅನಿಲದಲ್ಲಿ ದುರಂತಕ್ಕೊಳಗಾದ ಎಲ್ಲಾ ಕುಟುಂಬಗಳಿಗೂ ಎರೆಡು ತಲೆ ಮಾರಿನವರೆಗೂ ಚಿಕಿತ್ಸೆ ಕೊಡಿಸಬೇಕು ಎಂಬುದು ಹೋರಾಟಗಾರರ ಬೇಡಿಕೆಯಾಗಿದೆ. ಯೂನಿಯನ್ ಕಾರ್ಬಾಯಿಡ್ ಕಾರ್ಖಾನೆಯ ಸುತ್ತ-ಮುತ್ತ ಇರುವ ಲೆಥಲ್ ಕೆಮಿಕಲ್ಸ್‌ನ್ನು ತಕ್ಷಣವೇ ಅಲ್ಲಿಂದ ತೆಗೆಯಬೇಕೆಂಬುದೂ ಕೂಡಾ ಇವರ ಬೇಡಿಕೆಯಾಗಿದೆ. ಭೋಪಾಲ್ ಗ್ಯಾಸ್ ನಂತಹ ದುರಂತಗಳು ನಮ್ಮ ಕಣ್ಣು ತೆರೆಯಿಸಬೇಕಾಗಿದೆ. ಜೊತೆಗೆ ಚಂಪಾ ದೇವಿಲಾಲ್ ಶುಕ್ಲರವರು ಪೊರಕೆ ಹಿಡಿದುಕೊಂಡು ವಿದೇಶೀ ಕಂಪನಿಗಳ ಯಜಮಾನ್ಯತೆಯನ್ನು ವಿರೋಧಿಸುತ್ತಿರುವ, ಅವರ ಆಕ್ರೋಶ, ಆ ಕ್ರಂದನಗಳೂ ಕೂಡಾ ನಮ್ಮನ್ನು ಎಚ್ಚರಗೊಳಿಸಬೇಕಾಗಿದೆ.

# ಕಪ್ಪು ಹಕ್ಕಿಯ ಬೆಳಕಿನ ಹಾಡು

'ಕತ್ತಲ ಹೂವಿನ ಹಾಡಿನ' ಮೂಲಕ ಆಫ್ರಿಕನ್ - ಅಮೇರಿಕನ್ ಮತ್ತು ಆಫ್ರಿಕನ್ ಮಹಿಳಾ ಕವಿಯತ್ರಿಯರ ಕವನಗಳನ್ನು ಕನ್ನಡಿಗರಿಗೆ ಪರಿಚಯಿಸಿದ ಎಂ.ಆರ್.ಕಮಲ ಈಗ 'ಕಪ್ಪು ಹಕ್ಕಿಯ ಬೆಳಕಿನ ಹಾಡು' ಮೂಲಕ ಗುಲಾಮ ಪದ್ಧತಿಯ ವಿರುದ್ಧ ಸೆಣೆಸಿದ ಕಪ್ಪು ಮಹಿಳೆಯರ ಆತ್ಮಕತೆಗಳನ್ನು ಕನ್ನಡಿಗರಿಗೆ ಪರಿಚಯಿಸುವ ಅತ್ಯಂತ ಮಹತ್ವವಾದ ಕೆಲಸವನ್ನು ಅನುವಾದದ ಮೂಲಕ ಮಾಡಿದ್ದಾರೆ. ಕಪ್ಪು ಮಹಿಳೆಯರ ಆತ್ಮಕಥೆಗಳ ಹಿನ್ನೆಲೆಯಾಗಿ ಗುಲಾಮ ವ್ಯಾಪಾರದ ಉಗಮ, ಬೆಳವಣಿಗೆ, ಅಂತ್ಯದ ಬಗ್ಗೆ ಮೊದಲನೆಯ ಅಧ್ಯಾಯದಲ್ಲಿ ಈ ಪದ್ಧತಿಯ ಬಗ್ಗೆ ದೀರ್ಘವಾದ ಚಾರಿತ್ರಿಕ ನೋಟವನ್ನು ನೀಡಿದ್ದಾರೆ.

ಈ ಅನುವಾದದ ಆತ್ಮಕತೆಗಳು ಬರಿಯ ಪದಕೋಶಗಳ, ಸಾಲುಗಳ ಅನುವಾದವಾಗಿರದೇ ಆ ಬದುಕಿನ ನೋವು/ ಸಂತೋಷಗಳ ಸ್ಮರಣೆಯನ್ನು, ಕಕ್ಕುಲತೆಯನ್ನು, ಅವಮಾನಗಳನ್ನು, ಉದ್ರೇಕಗಳನ್ನು , ಸಂಯಮಗಳನ್ನು ಕನ್ನಡದ ಸಂವಾದಿ ಭಾಷೆಯಲ್ಲಿ ಸಮರ್ಥವಾಗಿ ಕಟ್ಟಿ ಕೊಡುವುದರಿಂದ ಆ ಕಪ್ಪು ಮಹಿಳೆಯರ ಭಾವನೆಗಳನ್ನು, ಜೀವನಗಳನ್ನು, ನೋವು ನಲಿವುಗಳನ್ನು ನಾವೂ ಕೂಡಾ ನಮ್ಮೊಳಗೆ ನೋಡಿಕೊಳ್ಳುವಂತಾಗುತ್ತದೆ.

ಎಲಿಜಿಬೆತ್ ಕೆಕ್‌ಲೆ ಗುಲಾಮ ಪದ್ಧತಿಯಿಂದ ಬಿಡುಗಡೆ ಹೊಂದುತ್ತ, ಸ್ವಾತಂತ್ರ್ಯದ ತನ್ನ ಕಥೆ ಹೇಳುತ್ತಲೇ ಅಮೇರಿಕದ ರಾಷ್ಟ್ರಾಧ್ಯಕ್ಷರಾಗಿದ್ದ ಅಬ್ರಹಾಂ ಲಿಂಕನ್ ಹಾಗೂ ಅವರ ಪತ್ನಿ ಮೇರಿ ಲಿಂಕನ್‌ರವರ ಕಥೆ ಬಿಚ್ಚಿಡುವ ರೀತಿ ಮನ ಮಿಡಿಯುವಂತಹದು. ಜೊತೆಗೆ ರಾಜಕೀಯದ ಅತೀ ಸೂಕ್ಷ್ಮ ಹರವುಗಳನ್ನು, ಅದರೊಳಗಿರುವ ಮಾನವೀಯ ಅನುಕಂಪಗಳನ್ನು, ನೀಚತನ, ರಾಕ್ಷಸತನಗಳನ್ನು 'ತೆರೆಯ ಹಿಂದೆ' ನ ಆತ್ಮಕತೆ ಬಿಚ್ಚಿಡುತ್ತದೆ. ಎಲಿಜಿಬೆತ್ ಕೆಕ್‌ಲೆ - ಒಬ್ಬ ವಸ್ತ್ರವಿನ್ಯಾಸಕಳಾದ ನೀಗ್ರೋ ಹೆಂಗಸು. ಈ ಹೆಂಗಸಿನ ಗುಲಾಮಗಿರಿಯಿಂದ ಹೊರಬಂದ ಕಣ್ಣುಗಳ ಮೂಲಕ ಅಬ್ರಹಾಂ ಲಿಂಕನ್ ಹಾಗೂ ಅವರ ಪತ್ನಿ, ಮಕ್ಕಳು, ರಾಜಕೀಯ ಎಲ್ಲವೂ ತಳಕು ಹಾಕಿಕೊಂಡು ಒಡ ಮಾಡಿರುವ ಆತ್ಮಕಥೆ ಅಚ್ಚರಿ ಮೂಡಿಸುವಂತಹದು.

ಎಲಿಜಿಬೆತ್ ಕೆಕ್‌ಲೆ ತನ್ನ ಬಾಲ್ಯದಿಂದ ಕಥೆ ಪ್ರಾರಂಭಿಸುತ್ತಾಳೆ. ನಾಲ್ಕು ವರ್ಷದ ಮಗುವಾದಾಗಿನಿಂದ ತಾನು ಗುಲಾಮಗಿರಿಗೆ ಒಳಗಾಗಿದ್ದು, ಬೆಳೆಯುತ್ತಾ, ಬೆಳೆಯುತ್ತಾ ಗುಲಾಮಗಿರಿ ಪದ್ಧತಿಯ ಕ್ರೌರ್ಯ ಅನುಭವಿಸಿದ್ದು, ಲೈಂಗಿಕ ಶೋಷಣೆಗೆ ಒಳಗಾಗಿದ್ದು, ಇಚ್ಛೆ ಪಡದೇ ಮಗುವಿಗೆ ಜನ್ಮವಿತ್ತದ್ದು, ಮಗು ಗುಲಾಮಗಿರಿಯಲ್ಲಿ ಬೆಳೆಯಬಾರದೆಂದು ಇಚ್ಛಿಸಿದ್ದು, ತಾನೇ ಹಣ ತೆತ್ತು ಗುಲಾಮಗಿರಿಯಿಂದ ಬಿಡಿಸಿಕೊಂಡು ಸ್ವತಂತ್ರ್ಯಳಾಗಿದ್ದು ಹೀಗೆ ಪ್ರಾರಂಭಗೊಳ್ಳುವ ಆತ್ಮಕಥೆ ಶ್ರೀಮತಿ ಲಿಂಕನ್‌ಳ ಜೀವಗಾಥೆಯೊಂದಿಗೆ ಮುಕ್ತಾಯಗೊಳ್ಳುತ್ತದೆ.

ಬದುಕಿನುದ್ದಕ್ಕೂ ಕರಿಯರಿಗಾಗಿ, ಅವರ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅಬ್ರಹಾಂ ಲಿಂಕನರ ಹತ್ಯೆ ನಡೆದ ಮೇಲೆ ಶ್ವೇತಭವನದಿಂದ ಹೊರ ಹೊರಟ ಶ್ರೀಮತಿ ಲಿಂಕನ್‌ರವರು ಜೀವನ ನಡೆಸಲು ಸೆಣೆಸಿದ ಕಥೆಯ ವಿವರದೊಂದಿಗೆ ಈ ಆತ್ಮಕತೆ ಮುಗಿಯುತ್ತದೆ. ಈ ಆತ್ಮ ಕಥೆ ನೀಡುವ ವಿವರಗಳು ಯಾರನ್ನಾದರೂ ಮರಗಟ್ಟಿಸುತ್ತವೆ. ಎಲಿಜಿಬೆತ್ ಕೆಕ್‌ಲೆ ಗುಲಾಮಗಿರಿಯ ದೌರ್ಜನ್ಯದ ವಿವರಗಳ ಜೊತೆಗೇ ಗುಲಾಮಗಿರಿಯಿಂದ ವಿಮುಕ್ತರಾಗಿ ಸ್ವತಂತ್ರ್ಯರಾದ ಜನರ ಬಗ್ಗೆ, ಅವರ ಸ್ವತಂತ್ರ್ಯದ ಕಲ್ಪನೆಯ ಬಗ್ಗೆ ಹೇಳುತ್ತಲೇ ಸ್ವತಂತ್ರ್ಯದ ಅರ್ಥವನ್ನು ಪರೀಕ್ಷೆಗೆ ಒಡ್ಡುವ ರೀತಿಯನ್ನು ಹಿಡಿದಿಡುತ್ತಾಳೆ.

ಶ್ವೇತಭವನದಲ್ಲಿರುವಾಗಲೇ ತನ್ನ ಗಂಡ ಸೋತರೆ ತನಗೆ ಕಾದಿರಬಹುದಾದ ಬದುಕಿನ ಬಗ್ಗೆ ಶ್ರೀಮತಿ ಲಿಂಕನ್ ಯೋಚಿಸುವ ರೀತಿ, ಗಂಡನ ಹತ್ಯೆಯ ನಂತರ ಬದುಕಲು ಆಭರಣ, ವಸ್ತ್ರಗಳನ್ನು ಮಾರಲು ಸಾಧ್ಯವಾಗದೇ ರಾಜಕೀಯ, ಮಾಧ್ಯಮಗಳ ಒತ್ತಡಗಳಿಂದ ಕಂಗಾಲಾಗುವ ಶ್ರೀಮತಿ ಲಿಂಕನ್ ರವರ ಜೀವನ ಚಿತ್ರಣ - ಶ್ವೇತಭವನದ, ಅಮೇರಿಕನ್ ರಾಜಕೀಯದ ಕ್ರೂರತೆಗಳನ್ನು ಬಿಚ್ಚಿ ಇಡುತ್ತದೆ. ಇದೆಲ್ಲಕ್ಕಿಂತ ಹೆಚ್ಚಾಗಿ ಒಬ್ಬ ಗುಲಾಮಿ ಹೆಂಗಸಿನ ಜೊತೆಗಿನ ಶ್ವೇತಭವನದ ರಾಷ್ಟ್ರಾಧ್ಯಕ್ಷರ ಹೆಂಡತಿಯ ಸಂಬಂಧ ಕೂಡಾ ಅಚ್ಚರಿ ಹುಟ್ಟಿಸುತ್ತದೆ. ಅಬ್ರಹಾಂ ಲಿಂಕನ್‌ರವರಿಗೆ ಕಪ್ಪು ಜನಾಂಗದ ಬಗ್ಗೆ, ಗುಲಾಮರ ಬಗ್ಗೆ ಇರುವ ಕಳಕಳಿ, ಅವರ ಸರಳ ವ್ಯಕ್ತಿತ್ವ- ಎಲ್ಲರ -ಆತ್ಮಕತೆಗಳಲ್ಲಿ ಕೂಡಾ ಸುಳಿದು ಹೋಗುತ್ತದೆ ಎಲಿಜಬೆತ್ ಕೆಕ್‌ಲೆಯ ಆತ್ಮಕಥೆ ಗುಲಾಮ ಗಿರಿಯ ಜೊತೆಗೆ ಅಮೇರಿಕಾದ ಆ ಕಾಲದ ರಾಜಕೀಯವನ್ನು, ಅದರೊಳಗಿನ ಸ್ತ್ರೀ ಪರವಾದ ನೋಟವನ್ನು ನೀಡುವುದರಿಂದ ನಮಗೆ ಹೆಚ್ಚು ಅರ್ಥಪೂರ್ಣವಾಗಿ ಕಾಣುತ್ತದೆ.

ಈ ಇಡೀ ಆತ್ಮಕತೆಯಲ್ಲಿ 'ಪುಟ್ಟ ಪೋರಿಯ ನೆನಪು'......

'ಸೂರ್ಯನಿಗೆ ಮೋಡಗಳು ಅಡ್ಡಿಯಾದವು ಪ್ರೀತಿ ಹತಾಶೆಯನ್ನಷ್ಟೇ ತಂದಿತ್ತು. ವಿದಾಯ ಶಾಶ್ವತವಾಗಿತ್ತು. ಮೋಡಗಳಿಗೆ ಬೆಳ್ಳಿಯ ರೇಕುಗಳಿರಲಿಲ್ಲ. ಆದರೆ ಸ್ವರ್ಗದಲ್ಲಿರುವುದೆಲ್ಲ ಬೆಳ್ಳಿಯ ಸಾಮ್ರಾಜ್ಯ ಎಂಬ ನಂಬಿಕೆ ನನಗೆ. ಧೂಳು ತುಂಬಿದ, ನಡು ರಾತ್ರಿಯ ಕತ್ತಲೆ ಕವಿದ ದಾರಿಯಲ್ಲಿ ಸಂಕೋಲೆಗಳನ್ನು ಹೊತ್ತು ದಣಿಯುತ್ತಾ ದಾರಿ ಸವೆಸುವ ನನ್ನಂಥವರು ಒಂದು ದಿನ ದಿವ್ಯ ಬೆಳಗನ್ನು ನೋಡುತ್ತೇವೆ ಎಂಬ ಆಶಾಭಾವನೆ ನನ್ನದು' (ಪು 45)

ಇಂತಹ ಅನುವಾದದ ಭಾಷೆ ಕಾವ್ಯಾತ್ಮಕವಾಗಿದೆ. ಹಾಗೆಯೇ ಇಡೀ ಅನುವಾದದಲ್ಲಿ ಇಂತಹ ಒಂದು ಸೃಜನಶೀಲತೆ, ಕಾವ್ಯಾತ್ಮಕತೆ, ಶಿಷ್ಟತೆಯನ್ನು ಕಾಪಾಡಿಕೊಂಡಿರುವುದರಿಂದ ಅನುವಾದಗೊಂಡ ಆತ್ಮಚರಿತ್ರೆಗಳು ಬೆಚ್ಚನೆಯ ಭಾವನೆಗಳನ್ನು ಓದುಗರಲ್ಲಿ ಭರಿಸುತ್ತದೆ.

'ಕತ್ತಲೆಯ ಸೀಳಿ ಬಂದ ಬದುಕು' - ಲೂಸಿ ಎ.ಡೆಲೆನಿಯವರ ಆತ್ಮಚರಿತ್ರೆ. ತನ್ನ ತಾಯಿ ಸ್ವತಂತ್ರ್ಯಕ್ಕಾಗಿ ಹೋರಾಡಿದ್ದನ್ನು ಲೂಸಿ ಎ.ಡೆಲೆನಿ ತನ್ನ ಆತ್ಮಕಥೆಯಲ್ಲಿ ಬಿಚ್ಚಿಡುತ್ತಾಳೆ. ಲೂಸಿ.ಎ. ಡೆಲೆನಿಯ ಪ್ರತಿರೋಧ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. ಜೈಲಿನಲ್ಲಿ ಹದಿನೇಳು ಸುದೀರ್ಘ ತಿಂಗಳುಗಳನ್ನು ಬೆಳಕಿನ ಭರವಸೆಯಲ್ಲಿ ಆತಂಕದಿಂದ ಕಳೆದ ಲೂಸಿ ಎ.ಡೆಲೆನಿಗೆ ಸ್ವಾತಂತ್ರ್ಯದ ಅರ್ಥ, ಭರವಸೆ ಅವ್ವನಿಂದ ಬಂದದ್ದು. ಲೂಸಿ.ಎ.ಡೆಲೆನಿಯ ಕಾವ್ಯಾತ್ಮಕ ಶೈಲಿ ಕೂಡಾ ಓದುಗರನ್ನು ಸೆರೆ ಹಿಡಿಯತ್ತದೆ.

ಅಧ್ಯಾಯ 5 (ಪುಟ-91) ರಲ್ಲಿ ಬರುವ
ಎಲ್ಲ ನಗುವಿನ ಹಿಂದೆ ನೋವಿದೆ
ಎಲ್ಲ ನೋವಿನ ಹಿಂದೆ ನಿಟ್ಟುಸಿರಿದೆ
ಇಂದು ಕತ್ತಲು ಸುತ್ತ ಮುತ್ತಿದ್ದರೂ
ನಾಳೆಯ ಬೆಳಕು ಕಾಯುತ್ತಿದೆ

ಹೋರಾಟ ಮನೋಭಾವದ ಲೂಸಿ. ಎ.ಡೆಲಿನಿ ಕಪ್ಪು ಜನಾಂಗದ ಭರವಸೆಯ ಬೆಳಕಾಗುವುದು ಆಕೆಯ ಆತ್ಮ ಸ್ಥೈರ್ಯದಿಂದ, ಕುಗ್ಗದ ಮನಸ್ಸಿನಿಂದ. ಆಕೆ ಹಾಗೂ ಆಕೆಯ ಅವ್ವನ ಮಧ್ಯದ ಬೆಚ್ಚಗಿನ ಭಾವನೆಗಳು ತಾಯಿ/ಮಗಳ ಸಂಬಂಧದ ಮಾಧುರ್ಯವನ್ನು ಬಿಚ್ಚಿ ಇಡುತ್ತವೆ. 'ದೇವರು ಕೊಟ್ಟಿದ್ದನ್ನು ಕರವಸ್ತ್ರದಲ್ಲಿ ಮುಚ್ಚಿಡದೆ ಬಿಚ್ಚಿಟ್ಟಿದ್ದೇನೆ' ಎನ್ನುವ, 'ನನಗೆ ಬದುಕೆಂದರೆ ದೇವರ ಸೇವೆ. ಸಮಾಜದ ಋಣ ತೀರಿಸದ ಬದುಕು ಬದುಕೇ' (ಪು 95) ಎನ್ನುವ ಲೂಸಿ.ಎ.ಡೆಲೆನಿ ನಮ್ಮ - ನಿಮ್ಮೆಲ್ಲರ ಹೋರಾಟಕ್ಕೆ ಸ್ಫೂರ್ತಿದಾಯಕವಾಗಬಹುದಾದವಳು. ಹೋರಾಟದ ಧ್ವನಿಯಾಗಿ ಬಿಂಬಿತವಾಗುವವಳು. ವೈಯಕ್ತಿಕ ಕಷ್ಟದ ನೆಲೆಯಲ್ಲಿ ಹೋರಾಟ ನಡೆಸಿ - ತನ್ನಂತವರ ಸಮುದಾಯದವರ ಕಷ್ಟ, ನೋವು, ಹತಾಶೆಗೆ ಧ್ವನಿಯಾಗ ಬಯಸಿದವಳು.ಹಾಗಾಗಿಯೋ ಆಕೆಯ ಆತ್ಮಚರಿತ್ರೆ ಮುಗಿಯುವುದೂ ಕೂಡಾ ಇಂತಹ ಹೋರಾಟದ ಆಶಯಗಳ ಸಾಲುಗಳಿಂದಲೇ.

'ಬರುತ್ತಿದೆ ಕಾಲ, ಬರುತ್ತಿದೆ ಕಾಲ' ಎಂದು ಭರವಸೆಯ ಬೆಳಕಿನತ್ತ ನಮ್ಮನ್ನೊಯ್ಯುವ ಈಕೆ ಚಾವಟಿಯ ಏಟು ಮರೆಸುವ ಕಾಲ, ಸೋದರತ್ವ, ಸಮಾನತೆಯ ಕಾಲ, ಬೆವರು ಹರಿಸುತ್ತಿರುವ ಕೋಟಿ ಜನರಿಗೆ, ಸ್ವಾರ್ಥಿಗಳಿಗಿನ್ನು ನೆಲೆಯಿರದ ಕಾಲ ಬರುತ್ತಿದೆ ಎನ್ನುತ್ತ ಗುಲಾಮಗಿರಿ ನಾಶವಾಗುವ, ಕಪ್ಪು ಜನಾಂಗದ ಹೊಸ ಬದುಕಿಗೆ, ಹೊಸ ಗಾಳಿಗೆ ಮುಖ ಮಾಡುವುದನ್ನು ಈ ಮೂಲಕ ಸೂಚಿಸುತ್ತಾಳೆ.(ಪು 96)

ಸೂಸಿ ಕಿಂಗ್ ಟೇಲರ್ ತನ್ನ ಸೇನಾ ಶಿಬಿರದ ನೆನಪುಗಳನ್ನು ತನ್ನ ಆತ್ಮಚರಿತ್ರೆಯಲ್ಲಿ ಬಿಚ್ಚಿಡುತ್ತಾಳೆ. ಕಪ್ಪು ಜನಾಂಗದ ಮೊದಲ ಸೇನಾ ದಾದಿ ಈಕೆ. ಹಾಗಾಗಿ ಅನೇಕ ಮಹಿಳೆಯರಿಗೆ ಸ್ಫೂರ್ತಿ ಕೂಡಾ. ದಾದಿಯ ಕೆಲಸದೊಂದಿಗೆ ಈಕೆ ಸೇನೆಯ ಸೈನಿಕರಿಗೆ ಓದು-ಬರಹ ಕಲಿಸುತ್ತಿದ್ದಳು. ಈಕೆಯ ಸಂದರ್ಭದಲ್ಲಿ ಕರಿಯರ ವಿಮೋಚನೆಗಾಗಿ ಶ್ರಮ ಪಡುತ್ತಿದ್ದ ಯಾಂಕಿಗಳು ಬಿಳಿಯರನ್ನು ಹೆದರಿಸುವ ಬೋರ್ಡುಗಳು ಹೀಗಿದ್ದವು :

ನಾನೊಂದು ರಪ್ಪನೆ ಬಡಿವ ಹಾವು
ಮುಟ್ಟಿದರೆ ಬರುವುದು ಸಾವು
ಎಚ್ಚರಿಕೆ, ನಾನೊಂದು ಕಾಡು ಬೆಕ್ಕು
ಮುರಿಯುವೆ ನಿಮ್ಮ ಸೊಕ್ಕು

ಆ ಸಂದರ್ಭದಲ್ಲಿ ಕರಿಯರ ಶೋಷಣೆ ಮಾಡುವವರ ವಿರುದ್ಧ ಸಂಘಟಿತವಾಗಿದ್ದ ವಿರೋಧೀ ಶಕ್ತಿಗಳನ್ನು ನಾವು ಇಲ್ಲಿ ಕಾಣಬಹುದಾಗಿದೆ. ಹಾಗೆಯೇ ಸೂಸಿಕಿಂಗ್ ಟೇಲರ್ ಹೇಳುತ್ತಾಳೆ. " ಈ ಇಪ್ಪತ್ತನೆಯ ಶತಮಾನದಲ್ಲಿ ಬಾಸ್ಟನ್‌ನಲ್ಲಿ ಬದುಕುತ್ತಿರುವ ನಾನು - ನನ್ನ ಜನಾಂಗದ ಸ್ಥಿತಿ-ಗತಿಯ ಬಗ್ಗೆ ಹೋರಾಡಿ ಪಡೆದ ಸ್ವಾತಂತ್ರ್ಯದ ಬಗ್ಗೆ ಯೋಚಿಸಲೇ ಬೇಕಾಗಿದೆ. ಇನ್ನೂರು ವರ್ಷಕ್ಕೂ ಹೆಚ್ಚು ಕಾಲ ನನ್ನ ಜನಾಂಗ ಬಿಳಿಯರಿಗಾಗಿ ಬೆವರ ಹೊಳೆಯನ್ನೇ ಹರಿಸಿದರು. ಆದರೆ ಈ ಬಿಳಿಯರಿಗೆ ಸೋದರತ್ವ ಎಂಬ ಪದದ ಅರ್ಥವಾದರೂ ಗೊತ್ತಿದೆಯೇ ? " (ಪುಟ 117) ಹೀಗೆ ಪ್ರಶ್ನೆ ಕೇಳುತ್ತಲೇ ಸೂಸಿ ಕಿಂಗ್ ಟೇಲರ್ ತನ್ನ ಜನರಿಗಾಗಿ ದಾದಿಯಾಗಿ, ಶಿಕ್ಷಕಿಯಾಗಿ,

ಹೋರಾಟಗಾರ್ತಿಯಾಗಿ ಕೆಲಸ ಮಾಡಿದ್ದಾಳೆ. ಪ್ರಯಾಣದಲ್ಲಿ ಹಾಗೂ ಇತರ ಕಡೆಗಳಲ್ಲಿ ಕಪ್ಪು ಜನಾಂಗ ಅನುಭವಿಸುವ ಅವಮಾನ, ಕಿರುಕುಳ, ನೋವುಗಳನ್ನು ಸಹ ಈಕೆ ಆತ್ಮಕಥೆಯಲ್ಲಿ ಬಿಚ್ಚಿಡುತ್ತಾಳೆ. ಕೊನೆಗೆ ಹೇಳುತ್ತಾಳೆ, 'ಉಳಿದೆಲ್ಲ ಜನಾಂಗದಂತೆ ದೇವರ ಕಣ್ಣಲ್ಲಿ ಸ್ವತಂತ್ರ್ಯರಾಗಿ ಹುಟ್ಟಿರುವ ನಾವು ಸಂಯುಕ್ತ ಸಂಸ್ಥಾನದ ಪ್ರಜೆಗಳಾಗಿ ಕೇಳುವುದಿಷ್ಟೆ - ನ್ಯಾಯ, ಸಮಾನತೆ. ನಕ್ಷತ್ರ ಮತ್ತು ಪಟ್ಟಿಗಳನ್ನು ಒಳಗೊಂಡ ಧ್ವಜಕ್ಕಾಗಿ ಎಷ್ಟೋ ಕರಿಯ, ಬಿಳಿಯ ಸಂಗಾತಿಗಳು ಹುತಾತ್ಮರಾಗಿದ್ದಾರೆ. ಆ ಧ್ವಜವನ್ನೆಂದೂಮಲಿನಗೊಳಿಸಬಾರದು'.(ಪು 122)

ಹೀಗೆ ಈ ಕರಿಯ ಮಹಿಳೆಯರ ಪ್ರತಿಯೊಂದು ಆತ್ಮಕಥೆಯೂ ತಮ್ಮ ಜನಾಂಗದ ಬಿಡುಗಡೆ, ಸ್ವಾತಂತ್ರ್ಯದ ಆಶಯದೊಂದಿಗೆ ಮುಕ್ತಾಯವಾಗುತ್ತದೆ. ಹೋರಾಟದ ಸ್ಫೂರ್ತಿಯನ್ನು ಪ್ರತಿಯೊಂದು ಆತ್ಮಚರಿತ್ರೆಯಲ್ಲಿಯೂ ನಾವು ಕಾಣಬಹುದಾಗಿದೆ.

ಆ್ಯನಿ ಎಲ್.ಬರ್ಟನ್ ವರ್ಣಸಂಕರದಿಂದ ಹುಟ್ಟಿದಾಕೆ. ಶ್ರೀಮಂತ ಯುರೋಪಿಯನ್ ತಂದೆಯನ್ನು ಪಡೆದ ಈಕೆ ತನ್ನ ಬದುಕಿಗಾಗಿ ಹೋರಾಡಿದ್ದು ಕರಿಯ ಜನಾಂಗದ ಹೋರಾಟದ ಇನ್ನೊಂದು ಮುಖವನ್ನು ಎತ್ತಿ ಹಿಡಿಯುತ್ತದೆ. 'ಬಾಲ್ಯದ ಗುಲಾಮಗಿರಿಯ ದಿನದ ನೆನಪು'ಗಳಲ್ಲಿ ಈಕೆ ತನ್ನ ಅನುಭವಗಳನ್ನು ಬಿಚ್ಚಿ ಇಡುತ್ತಾಳೆ. ಈಕೆ ಬಾಲ್ಯದಲ್ಲಿ ಬೆಳೆದದ್ದು ಗುಲಾಮೀ ಮಗುವಾಗಿಯೇ. ಆಗೆಲ್ಲ ಆಕೆಯ ತಂದೆಯ ಬಗ್ಗೆ ಆಕೆಗೆ ತಿಳಿದದ್ದು ಇಷ್ಟು. "ನಾವಿದ್ದ ಜಾಗದಿಂದ ಎರಡು ಮೈಲಿ ದೂರದಲ್ಲಿ ಇದ್ದ ತೋಟಕ್ಕೆ ನನ್ನ ತಂದೆಯೇ ಮಾಲೀಕನೆಂದು ನನ್ನ ಒಡತಿ ಆಗಾಗ್ಗೆ ಹೇಳುತ್ತಿದ್ದಳು. ಅವನೊಬ್ಬ ಬಿಳಿಯ. ಇಂಗ್ಲೆಂಡಿನ ಲಿವರ್‌ಪೂಲ್‌ನಲ್ಲಿ ಹುಟ್ಟಿದವನು. ನಮ್ಮ ತೋಟದ ದೊಡ್ಡ ಮನೆಯ ಮುಂದೆ ಕುದುರೆಯ ಮೇಲೆ ಕೂತು ಹೋಗುತ್ತಿದ್ದ. ಅವನನ್ನು ಕಂಡಾಗಲೆಲ್ಲ ಒಡತಿ ನನ್ನನ್ನು ಹತ್ತಿರ ಕರೆಯುತ್ತಿದ್ದಳು. 'ಸ್ವಲ್ಪ ನಿಲ್ಲಿಸ್ತೀಯ ? ನಿನಗೆ ನಿನ್ನ ಮಗಳನ್ನು ಮುದ್ದು ಮಾಡಬೇಕೆಂದು ಅನ್ನೋದಿಲ್ವೇ ? ಎಷ್ಟು ಚೆನ್ನಾಗಿದ್ದಾಳೆ. ಚಿತ್ರದಲ್ಲಿ ಬರೆದ ಹಾಗೆ - ನೀನೊಬ್ಬ ಒಳ್ಳೆಯ ತಂದೆ ಅಲ್ವಾ ?"(ಪು 127)

'ನನ್ನ ಒಡತಿ ಹೀಗೆ ಕೂಗಿ ಹೇಳಿದಾಗಲೆಲ್ಲಾ ಆತ ಕುದುರೆಗೆ ಕೋಪದಿಂದ ಚಾವಡಿ ಬೀಸಿ ಮರೆಯಾಗುತ್ತಿದ್ದ. ನಾನು ಅವನೊಂದಿಗೆ ಎಂದೂ ಮಾತನಾಡಲಿಲ್ಲ. ಬಹುಶಃ ಅವನು ನನ್ನನ್ನು ಮಗಳೆಂದು ಒಪ್ಪಿಕೊಂಡಿರಲಿಲ್ಲ. ನನ್ನ ಕಡೆ ಅವನು ನೋಡಿದಂತೆಯೂ ಅನ್ನಿಸಲಿಲ್ಲ.(ಪು 127)

ವರ್ಣ ಸಂಕರದಿಂದ ಹುಟ್ಟಿದ ಮಕ್ಕಳ ಬಗ್ಗೆ ಸ್ವಂತ ತಂದೆಗೂ ಇದ್ದ ಅಸಡ್ಡೆ, ಲೈಂಗಿಕತೆಗೆ ಕರಿಯ ಹೆಂಗಸರನ್ನು ಬಳಸುವ ಮುಖಗಳನ್ನು ಈ ಆತ್ಮಚರಿತ್ರೆ ಬಿಂಬಿಸುತ್ತದೆ. ಈ ಹುಡುಗಿ ಇತರ ಗುಲಾಮೀ ಮಕ್ಕಳೊಂದಿಗೆ ಬೋಗುಣಿಯಲ್ಲಿ ಉಣ್ಣುತ್ತಾಳೆ, ಮೊಸರಿನ ಗಡಿಗೆಯ ಮೇಲೆ ಬಿದ್ದುದ್ದಕ್ಕಾಗಿ ಚಾವಟಿ ಏಟು ತಿನ್ನುತ್ತಾಳೆ. ಹೀಗೆ ವರ್ಣ ಸಂಕರದಿಂದ ಹುಟ್ಟಿದ ಮಕ್ಕಳ ಗುಲಾಮಗಿರಿಯ ದೌರ್ಜನ್ಯಕ್ಕೆ ಅವಮಾನಕ್ಕೆ ಒಳಗಾಗುವುದು ಈ ಆತ್ಮಚರಿತ್ರೆಯಲ್ಲಿ ಕಂಡು ಬರುತ್ತದೆ.

ಆ್ಯನಿ ಎಲ್. ಬರ್ಟನ್ ನಂತರದ ದಿನಗಳಲ್ಲಿ ಕೆಲಸಕ್ಕಾಗಿ ಅಲೆಯುತ್ತಾಳೆ. ಅಕ್ಕ ಸತ್ತಾಗ ಅಕ್ಕನ ಮಗು ಲಾರೆನ್ಸ್‌ನನ್ನು ಸಲಹುತ್ತಾಳೆ. ಈಕೆಯ ಒಡತಿಯೊಬ್ಬಳು ಈಕೆಯನ್ನು ಬಾಲ್ಯದಲ್ಲಿ ಭಾನುವಾರದ ಶಾಲೆಗೆ ತಪ್ಪದೇ ಕಳಿಸುತ್ತಿದ್ದರಿಂದ ಈಕೆ ಓದುವುದನ್ನು, ಬರೆಯುವುದನ್ನು ಕಲಿಯುತ್ತಾಳೆ. 1888ರಲ್ಲಿ ಸ್ಯಾಮುಯಲ್ ಎಚ್. ಬರ್ಟನ್ ಎಂಬುವನನ್ನು ಮದುವೆಯಾಗುವವರೆಗೂ ಆಕೆ ರೆಸ್ಟೊರೆಂಟ್ ನಡೆಸಿ, ಮನೆಗೆಲಸ ಮಾಡಿ, ತನ್ನ ಅಕ್ಕನ ಮಗು ಲಾರೆನ್ಸ್‌ನನ್ನು ಸಾಕುತ್ತಾ ತನ್ನ ಬದುಕು ಸಾಗಿಸುವ ನೋವು ನಲಿವುಗಳನ್ನು ಆತ್ಮಚರಿತ್ರೆಯಲ್ಲಿ ಬಿಚ್ಚಿಡುತ್ತಾಳೆ. ಫ್ರಾಂಕ್‌ಲಿನ್ ಸಂಜೆ ಶಾಲೆಗೆ ಈಕೆ ಹೋಗಿದ್ದಾಗ ಅಲ್ಲಿ ಎಲ್ಲಾ ವಿದ್ಯಾರ್ಥಿಗಳಿಗೆ ತಮ್ಮ ಬದುಕಿನ ಕಥೆ ಬರೆಯಲು ಹೇಳಿದಾಗ ಆ್ಯನಿ ಎ. ಬರ್ಟನ್ ಬರೆದ ಆಕೆಯ ಕಥೆ ಶಿಕ್ಷಕರೊಬ್ಬರಿಗೆ ಇಷ್ಟವಾಗುತ್ತದೆ. ಆಕೆ ವಿಸ್ತಾರವಾಗಿ ಅದನ್ನು ಬರೆದು ಪ್ರಕಟಿಸಬೇಕೆಂದು ಅಲ್ಲಿ ದೊರೆತ ಪ್ರೋತ್ಸಾಹ, ಸ್ಫೂರ್ತಿಯಲ್ಲಿಯೇ 49ನೆಯ ವಯಸ್ಸಿನಲ್ಲಿ ಈಕೆ ತನ್ನ ಆತ್ಮಚರಿತ್ರೆ ಬರೆದು ಮುಗಿಸುತ್ತಾಳೆ. ಈಕೆಯ ಕವಿಯ ಹೃದಯದ ಸ್ಪಂದನೆಯನ್ನು ಈ ಕೆಳಗಿನ ಸಾಲುಗಳಲ್ಲಿ ಕಾಣಬಹುದಾಗಿದೆ.

ನನ್ನ ಬದುಕೊಂದು ವಸಂತದ ಗುಲಾಬಿ
ಬೆಳಗಿನ ಆಗಸಕ್ಕೆ ಮುಖ ತೆರೆಯುತ್ತದೆ
ಸಂಜೆಯ ನೆರಳು ನೀಳವಾಗುತ್ತಿದ್ದಂತೆ
ಉದುರಿ ಚದುರಿದ ದಳಗಳ ಹಾಸಿಗೆ
ಮೇಲೆ ಬಿದ್ದ ಇಬ್ಬನಿಯ ಹನಿ
ನನಗಾಗಿ ಅತ್ತಂತೆ ಭಾಸವಾಗುತ್ತದೆ.

ನನ್ನ ಬದುಕೊಂದು ಶಿಶಿರದ ಎಲೆ
ಚಂದಿರನ ತಣ್ಣನೆಯ ಕಿರಣಕ್ಕೂ ಅದುರಿ
ಕ್ಷಣಗಳ ಎಣಿಸುತ್ತದೆ ಟೊಂಗೆಯನ್ನು ಅಪ್ಪಿ

ಕಳವಳಿಸುತ್ತದೆ ಹಾರಿ ಹೋಗುವ ಬದುಕಿಗೆ
ಬೋಳು ಮರವ ಕಂಡ ಗಾಳಿ ಗೋಳಿಡುತ್ತದೆ
ನನಗಾಗಿ ನಿಟ್ಟುಸಿರಿಟ್ಟವರ ಕಾಣೆ.
ನನ್ನ ಬದುಕೊಂದು ತಾಂಪಾ ಮರುಭೂಮಿಯ
ಮೇಲೂರಿದ ಹೆಜ್ಜೆಗಳ ಹಾಗೆ
ಸುಂಟರಗಾಳಿ ಎದ್ದ ಹಾಗೆಲ್ಲ
ಗುರುತುಗಳು ಅಳಿಸುತ್ತವೆ
ಜನಾಂಗದ ಸುಳಿವೇ ಸಿಗದಂತೆ
ಏಕಾಂಗಿ ತೀರದಲ್ಲಿ ಸಮುದ್ರ ಅಳುತ್ತದೆ
ನನಗಾಗಿ ಅತ್ತವರನಾರನೂ ಕಾಣೆ.(ಪು 143)

ಗುಲಾಮೀ ಬದುಕಿಗೆ ಎದೆಯೊಡ್ಡಿದ, ಆ ಅವಮಾನ, ದಾರುಣತೆಯೊಳಗೇ ಹೋರಾಡಿ ಬದುಕಿ ಸ್ವತಂತ್ರ್ಯಗೊಂಡ ಈ ಕಪ್ಪು ಮಹಿಳೆಯರು ಹಿಡಿದಿಡುವ ಬದುಕಿನ ಸೂಕ್ಷ್ಮತೆಗಳು ಅದ್ಭುತವಾಗಿವೆ. ಆ್ಯನಿ ಎ.ಬರ್ಟನ್ ಆತ್ಮ ಚರಿತ್ರೆಯಲ್ಲಿ ಕೂಡಾ ಅಬ್ರಹಾಂ ಲಿಂಕನ್‌ರವರ ಜೀವಗಾಥೆ ಬರುತ್ತದೆ. ಈಕೆ ಅಬ್ರಹಾಂ ಲಿಂಕನ್‌ರವರ ಬಗ್ಗೆ ಒಂದು ಪ್ರಬಂಧ ಬರೆದಿದ್ದಾರೆ. ತಾನು ಕಾಯಿಲೆ ಬೀಳದಿದ್ದರೆ 1907 ರಲ್ಲಿಯೇ ಅಬ್ರಹಾಂ ಲಿಂಕನ್ ಬಗ್ಗೆ ಬರೆದ ಪ್ರಬಂಧ ತನಗೆ ಪದವಿ ದೊರಕಿಸಿಕೊಡಬೇಕಿತ್ತು ಎಂದು ಈಕೆ ಬರೆದುಕೊಳ್ಳುತ್ತಾರೆ. ಗುಲಾಮಗಿರಿ ನಿಷೇಧ ಶಾಸನಕ್ಕೆ ಅಧ್ಯಕ್ಷ ಲಿಂಕನ್‌ರವರ ಹಸ್ತಾಕ್ಷರದ ಪ್ರತಿಯನ್ನು ಕೂಡಾ ಈಕೆಯ ಆತ್ಮಚರಿತ್ರೆಯ ಜೊತೆ ಪ್ರಕಟಿಸಲಾಗಿದೆ.

ಈ 'ಕಪ್ಪು ಹಕ್ಕಿಯ ಬೆಳಕಿನ ಹಾಡು' ಇದರ ಕೊನೆಯ ಆತ್ಮ ಚರಿತ್ರೆ ಸಾಜರ್ನರ್ ಟ್ರೂತ್‌ಳದು. ಓದು, ಬರಹ ಕಲಿತಿರದ ಈಕೆ ತನ್ನ ಆತ್ಮಚರಿತ್ರೆಯನ್ನು ಆಲಿವ್ ಗಿಲ್ಬರ್ಟಗೆ ಹೇಳಿ ಬರೆಸುತ್ತಾಳೆ. ಕಮಲರವರು ಮೂಲಕೃತಿಯ ಆಯ್ದ ಭಾಗಗಳನ್ನು ಮಾತ್ರ ಸಂಗ್ರಹಿಸಿ ಅನುವಾದಿಸಿದ್ದಾರೆ. ಈಕೆಯು ಪ್ರವಚನಕಾರ್ತಿಯಾಗಿ ಹೊರ ಹೊಮ್ಮಿದಾಗ ಅಬ್ರಹಾಂ ಲಿಂಕನ್‌ರ ಗಮನ ಸೆಳೆದದ್ದೂ ಕಂಡು ಬರುತ್ತದೆ.

ಕಮಲ ಎಂ.ಆರ್ 'ಕಪ್ಪು ಹಕ್ಕಿಯ ಹಾಡು' ಮೂಲಕ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆ ಸಲ್ಲಿಸಿದ್ದಾರೆ. ಇವರು ಅನುವಾದಿಸಿದ ಐದು ಜನ ಕಪ್ಪು ಮಹಿಳೆಯರ ಹೋರಾಟದ ಕಥೆಗಳು ನಮ್ಮಲ್ಲಿ ಚೈತನ್ಯ, ಉತ್ಸಾಹ ತುಂಬ ಬಲ್ಲವುಗಳಾಗಿವೆ. ಅಷ್ಟೊಂದು ವಿಚಾರಗಳನ್ನು ಜೋಡಿಸಿ ನೀಡಿರುವ ಮಾಹಿತಿಗಳು ಉಪಯುಕ್ತಕರವಾಗಿವೆ. ಮುಖಪುಟ, ಶೀರ್ಷಿಕೆ ಕೂಡಾ ಸುಂದರವಾಗಿವೆ. ಆತ್ಮ ಚರಿತ್ರೆಗಳ ಜೊತೆಗೆ ಪ್ರಕಟಗೊಂಡಿರುವ ಫೋಟೋಗಳು ಗುಲಾಮಗಿರಿಯ ಸಂದರ್ಭವನ್ನು ಕಣ್ಣಿಗೆ ಕಟ್ಟಿಕೊಡುತ್ತವೆ. ಕಾಲ ಸೂಚಿ ಹಾಗೂ ಪದಕೋಶಗಳ ಮೂಲಕ ಚಾರಿತ್ರಿಕ ಐತಿಹಾಸಿಕ ಸ್ಪಷ್ಟತೆಯನ್ನು ನೀಡಿದ್ದಾರೆ. 'ode to women' ಪದ್ಯವನ್ನು ಪುಸ್ತಕದ ಪ್ರಾರಂಭದಲ್ಲಿ ನೀಡುವ ಮೂಲಕ (Sarah G. Jones) ಕಪ್ಪು ಮಹಿಳೆಯರ ಆಶಯಗಳನ್ನು ಇಡಿಯಾಗಿ ಪ್ರತಿನಿಧಿಸಿದ್ದಾರೆ. ಮೊದಲೇ ಹೇಳಿದ ಹಾಗೆ ಕಮಲರವರ ನವಿರಾದ, ಕಾವ್ಯಾತ್ಮಕ ಭಾಷೆ ಕಪ್ಪು ಜನಾಂಗದ ಸೊಗಡಿಗೆ, ನೋವಿಗೆ, ನಲಿವಿಗೆ ಪ್ರತಿ ಸ್ಪಂದಿಸಿರುವುದರಿಂದ ಆ ಮಹಿಳೆಯರ ಅನುಭವಗಳು ನಮಗೆ ಹತ್ತಿರವಾಗುತ್ತವೆ. ಕಮಲರವರು 'ಕಪ್ಪು ಹಕ್ಕಿಯ ಬೆಳಕಿನ ಹಾಡು' ಈ ಪುಸ್ತಕ - ಪುಸ್ತಕ ಮಾಲೆಯ ಮೊದಲ ಬಿಡಿ ಹೂವಾಗಿದೆ ಎಂದಿದ್ದಾರೆ. ಇನ್ನೂ ಮಹತ್ವವಾದ ಕಪ್ಪು ಮಹಿಳೆಯರ ಕೃತಿಗಳನ್ನು ಅನುವಾದಿಸಿ ಸ್ವರ ಸಂಯೋಜನೆ ಪೂರ್ಣಗೊಳಿಸಲಿ ಎಂದು 'ಮಾನಸ' ಹಾರೈಸುತ್ತದೆ.

ಚಂಪಾವತಿ ಎಚ್. ಎಸ್.

'ಮಾನಸ' - ಚಂದಾದಾರರಲ್ಲಿ ವಿನಂತಿ. 'ಮಾನಸ' ಪತ್ರಿಕೆ ಉಳಿಸುವ, ಬೆಳೆಸುವ ಜವಾಬ್ದಾರಿ ನಮ್ಮ-ನಿಮ್ಮೆಲ್ಲರ ಮೇಲೆ ಇದೆ. ಚಂದಾ ನವೀಕರಿಸಿ, ಮಾನಸಕ್ಕೆ ಕಥೆ, ಲೇಖನ ಕವನ ತಪ್ಪದೇ ಕಳುಹಿಸಿ ಕೊಡಿ

ಸಂಪಾದಕ ಮಂಡಳಿ

# 'ಜೀವನ ಪ್ರೀತಿ' - ಒಂದು ಕಿರು ನೋಟ

- ಕಲಾವತಿ

ಸ್ವಾತಂತ್ರ್ಯಪೂರ್ವ ಅವಧಿಯ ಕಥೆಗಾರ್ತಿಯಾದ ಕೊಡಗಿನ ಗೌರಮ್ಮನವರ ಎಲ್ಲಾ ಕಥೆಗಳ ಈ ಸಂಗ್ರಹವನ್ನು ಸಂಪಾದಿಸಿದವರು ಕಾಳೇಗೌಡ ನಾಗವಾರ. ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಕಟಿಸಲಾದ ಈ ಪುಸ್ತಕದಲ್ಲಿ ಕೊಡಗಿನ ಗೌರಮ್ಮನವರ ಕಥೆಗಳ ಜೊತೆಗೆ ಅವರ ಸಂಪೂರ್ಣ ವ್ಯಕ್ತಿತ್ವದ ಪರಿಚಯ ಕೂಡಾ ಆಗುತ್ತದೆ. ಅವರ ಬಗ್ಗೆಗಿನ ಅನೇಕ ಮಾಹಿತಿಗಳನ್ನು, ಅವರ ನಿಕಟ ಸಂಪರ್ಕಗಳನ್ನು, ಹಾಗೂ ಅವರ ವ್ಯಕ್ತಿತ್ವದ ನಿಲುವುಗಳನ್ನು ಹೊಂದಿರುವ ಈ ಸಂಕಲನ ಅಮೂಲ್ಯವಾದುದಾಗಿದೆ. ಈ ಸಂಗ್ರಹದಿಂದ ಆಯ್ದುಕೊಳ್ಳಲಾದ ಹಲವಾರು ಭಾಗಗಳನ್ನು ಈ ಲೇಖನದ ಭಾಗವಾಗಿ ಪ್ರಕಟಿಸುತ್ತಿದ್ದೇವೆ.

ಗೌರಮ್ಮನವರು ನಮಗೆ ಇಂದಿಗೂ ಪ್ರಸ್ತುತವಾಗುವುದು ಎರಡು ಕಾರಣಗಳಿಂದ. ಒಂದು-ಅವರಲ್ಲಿದ್ದ ವೈಚಾರಿಕ ಪ್ರಜ್ಞೆ .ಎರಡು :- ಅವರ ಕಥಾ ಸಾಹಿತ್ಯದಲ್ಲಿನ ನಿರ್ವಿಜ್ಞ ಕಲಾಗಾರಿಕೆ ಹಾಗೂ ಸಂವೇದನೆ. 1912ರಲ್ಲಿ ಹುಟ್ಟಿ - 1939 ರಲ್ಲಿ ತಮ್ಮ ಇಹ ಜೀವನದ ಪ್ರಯಾಣ ಮುಗಿಸಿದ್ದ ಈ ಕಥೆಗಾರ್ತಿ ಅಷ್ಟು ಅಲ್ಪ ಸಮಯದಲ್ಲಿ ಕನ್ನಡ ಸಾಹಿತ್ಯ ಲೋಕದ ಮೇಲೆ ಬೀರಿದ ಪ್ರಭಾವ ಮಹತ್ವವಾದುದು. ಇವರು 'ಕಂಬನಿ' ಹಾಗೂ 'ಚಿಗುರು' ಎಂಬ ಎರೆಡು ಕಥಾ ಸಂಕಲನಗಳ ಮೂಲಕ ಸಾಹಿತ್ಯಾಸಕ್ತರ ಗಮನ ಸೆಳೆದದ್ದು ವಿಶೇಷವಾಗಿದೆ. ಅವರು ಬರೆದ ಒಟ್ಟು ಕಥೆಗಳು ಇಪ್ಪತ್ತೊಂದು. ಈ ಇಪ್ಪತ್ತೊಂದು ಕಥೆಗಳ ಆಶಯ, ಚೌಕಟ್ಟುಗಳಲ್ಲಿ ಲಿಂಗಭೇದ ನೀತಿ, ಜಾತಿಪದ್ಧತಿ, ವಿಧವಾ ವಿವಾಹ, ಸಮಾಜದ ಕಟ್ಟು-ಕಟ್ಟಳೆಗಳು ಇವುಗಳನ್ನು ಪ್ರಶ್ನಿಸುವ ಮನೋಭಾವ ಕಂಡು ಬರುತ್ತದೆ. ಹೀಗೆ ಪ್ರಶ್ನಿಸುವಾಗ ಅವರು ಆರಿಸಿಕೊಂಡ ಕಲಾ ಕೃತಿಯ ಆಕೃತಿಗಳು ಮುಖ್ಯವಾಗಿ ಹೀಗಿವೆ.

1. ವಿವರಣಾ ಮಾದರಿ
2. ಸಂಭಾಷಣಾ ಮಾದರಿ
3. ಪತ್ರಗಳ ಮಾದರಿ
4. ಪೇಪರ್‌ನಲ್ಲಿ ಪ್ರಕಟವಾದ ವಿಷಯದ ಮಾದರಿ

ಈ ಆಕೃತಿಗಳ ಮೂಲಕ ಅವರ ಇಪ್ಪತ್ತೊಂದು ಕಥೆಗಳು ತಮ್ಮ ಆಶಯಗಳನ್ನು ಬಿಚ್ಚಿ ಇಡುತ್ತವೆ. ಇವರ ವಿವರಣಾ ಮಾದರಿಯ ಕಥೆಗಳಲ್ಲಿ ಹೆಚ್ಚು ಮೂರನೇ ವ್ಯಕ್ತಿಯ ಮೂಲಕವೇ ಕಥೆ ಹೇಳಿಸುವುದು ಕಂಡು ಬರುತ್ತದೆ-'ಮರದಗೊಂಬೆ' 'ಆಹುತಿ' 'ಮನರ್ವಿವಾಹ' 'ಮನುವಿನ ರಾಣಿ' 'ಒಂದು ಚಿತ್ರ' 'ಪಾಪನ ಮದುವೆ' ಈ ಆರು ಕಥೆಗಳಲ್ಲಿ ಮೊದಲನೇ ವ್ಯಕ್ತಿಯ ಮೂಲಕ ಕಥೆ ಹೇಳಿಸುವುದು ಕಂಡು ಬರುತ್ತದೆ. ಮೂರನೇ ವ್ಯಕ್ತಿಯ ವಿವರಣೆಗಳಿಂದಾಗಿ ಪಾತ್ರಗಳ ಜೊತೆ ದೂರವನ್ನು ಕಾದುಕೊಂಡು ಒಂದು ರೀತಿಯ ನಿರ್ಭಾವದಿಂದ ಕಥೆ ಹೇಳುವ ರೀತಿ ಕಂಡು ಬರುತ್ತದೆ. ಮೊದಲನೇ ವ್ಯಕ್ತಿಯ ವಿವರಣೆಯ ಕಥೆಗಳಲ್ಲೂ 'ಪುರುಷ' ಪಾತ್ರಗಳ ಕಣ್ಣಿನಿಂದ ಹೇಳಿರುವ ಕಥೆಗಳೇ ಹೆಚ್ಚು.

ಗೌರಮ್ಮನವರು ಸಂಭಾಷಣೆ, ಪತ್ರಗಳ ಮಾದರಿ, ಪೇಪರ್

## 'ತಂಗಿ ಗೌರಮ್ಮ'

ಜಲದೇವತೆ ವನದೇವತೆ ಒಂದಡೆಯಲಿ ಸೇರಿ
ಬಿನದಿಸುತಿಹ ಹೊಳೆಮಡುವಿಗೆ ನೀನೀಸಲು ಹಾರಿ
ತಾಯೊಡಲನು ಕೂಸಾಟಕೆ ತಾಯ್ಮಡಲಿಗೆ ಬೀರಿ
ತೀರಲು, ಜಡವಾಗಳೆ ಕಾವೇರಿಯೇ ತಂಪೇರಿ?
ನೆನೆದರೆಯೇ ನಾ ನಡುಗುವೆ ಇದು ಆದುದದೆಂತೋ
ಎಲ್ಲಿಂದೀ ಎಳೆಜೀವಕೆ ಸಾವೆಂಬುದು ಬಂತೋ?
ಪತಿಯೊಲವಿನ ಸುತನೊಲವಿನ ಕೆಳೆಯೊಲವಿನ ತಂತು
ಜಗ್ಗದೆ ನಿನ್ನನು ಮೇಲಕೆ ? ನೀ ಮುಳುಗಿದೆಯೆಂತು ?
ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ
ಮಿಂಚಿದಳದೊ ಬಾನಂಚಿಗೆ ಕಾವೇರಿಯ ಕುವರಿ।
ಬೆಳದಿಂಗಳೆ ಕರುವಿಟ್ಟಿತೊ ಈ ನಿರ್ಮಲ ಮೂರ್ತಿ
ಮೊದಲಿಲ್ಲಿಯೆ ಕುಡಿಬಿಟ್ಟಿತೊ ಮುಗುಳಿಟ್ಟಿತೊ ಕೀರ್ತಿ ?
ಉಷೆ ಸುರಿಸುವ ಇಬ್ಬನಿಯೊಲು ಕರುಣೆಯ ಕಂಬನಿಯ
ಬಾಳ್ ಬಳ್ಳಿಗೆ ಬೀರಿದೆ ನೀ ಮಧು ಹಾಸ್ಯದ ಹನಿಯೆ.

ದ.ರಾ.ಬೇಂದ್ರೆ.

(ತಮ್ಮ 27ನೆಯ ವಯಸ್ಸಿನಲ್ಲಿ ಕೊಡಗಿನ ಗೌರಮ್ಮ ಹೊಳೆಯಲ್ಲಿ ಈಜಲು ಹೋಗಿ ಸಾವನಪ್ಪಿದ ಸಂದರ್ಭದಲ್ಲಿ ಬರೆದ ಪದ್ಯ)

ಸುದ್ಧಿಗಳಿಂದಾಗಿ ಒಂದು ಸರಳವಾದ ಕಥಾ ಹೇಳುವಿಕೆಯನ್ನು ಬಳಸಿಕೊಂಡಿದ್ದಾರೆ ಎಂದೂ ಕೂಡಾ ಅನಿಸುತ್ತದೆ.

ಗೌರಮ್ಮನವರ ಕಥೆಗಳು ವಿಧವಾ ವಿವಾಹದ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಹೇಳುತ್ತವೆ. ವಾಣಿಯ ಸಮಸ್ಯೆಯಲ್ಲಿ ಇಂದು ಬಂದಾಗ್ಯೂ ಸಹ ಇವರ ಸರಳ ನಿರೂಪಣೆ ಓದುಗರಿಗೆ ಮೆಚ್ಚುಗೆಯಾಗುತ್ತದೆ.

'ಮುನ್ನಾದಿನ' - 'ಅಪರಾಧಿ ಯಾರು?' 'ಹೋಗಿಯೇ ಬಿಟ್ಟಿದ್ದ' ಈ ಮೂರೂ ಕಥೆಗಳೂ ಹಿಂದೂ-ಮುಸ್ಲಿಂ- ಇತರೇ ಧಾರ್ಮಿಕ

ಇಪ್ಪತ್ತನೆಯ ಶತಮಾನದ ಮೂವತ್ತರ ದಶಕದಲ್ಲಿ ಕಾಣಿಸಿಕೊಂಡ ಕೊಡಗಿನ ಗೌರಮ್ಮ ಕನ್ನಡ ಕಥಾಲೋಕ ಕಂಡ ಸಂವೇದನಾಶೀಲ ಕಥೆಗಾರ್ತಿಯಾಗಿದ್ದಾರೆ. ಮೇಲುಜಾತಿಯ ಸುಶಿಕ್ಷಿತ ಮಧ್ಯಮ ವರ್ಗದಲ್ಲಿ ಹುಟ್ಟಿ ಬೆಳೆದ ಗೌರಮ್ಮ ದಟ್ಟ ಮಲೆನಾಡ ನಡುವಿನಿಂದ ಬಂದ ಲೇಖಕಿ. ತನ್ನ ಇಪ್ಪತ್ತೇಳನೆಯ ವಯಸ್ಸಿಗೇ ಅ ಕಾಲ ಮರಣಕ್ಕೆ ತುತ್ತಾದ ಗೌರಮ್ಮ ತಮ್ಮ 'ಕಂಬನಿ' (1939) ಮತ್ತು 'ಚಿಗುರು' (1942) ಎಂಬ ಎರೆಡು ಕಥಾ ಸಂಕಲನಗಳ ಮೂಲಕ ನಮ್ಮ ಉತ್ತಮ ಕಥೆಗಾರ್ತಿಯರಲ್ಲಿ ಒಬ್ಬರಾಗಿದ್ದು ಸಾಹಿತ್ಯಾಸಕ್ತರೆಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಪ್ರೊ. ಕಾಳೇಗೌಡ ನಾಗವಾರ.

ಅಲ್ಲಿಯ ತನಕ ಸುಖದ ಭಾವನೆಯಲ್ಲಿದ್ದವಳು ವಾಣಿ ಹಾಗೂ ಆಕೆಯ ಗಂಡ ರತ್ನ ರ ಸಂಸಾರ ಕಂಡಾಗ ತನಗೇನೋ ಕೊರತೆ ಎಂದು ಆಕೆಗೆ ಅನ್ನಿಸ ತೊಡಗುತ್ತದೆ. ಹಾಗೆಯೇ ವಾಣಿಯ ಗಂಡ ರತ್ನ ಹಾಗೂ ತನ್ನ ಮಧ್ಯೆ ಆಕರ್ಷಣೆ ಇದೆ ಎನ್ನಿಸಿದಾಗ ಆಕೆಗೇ ಭಯವಾಗುತ್ತದೆ. ನಂತರದಲ್ಲಿ ಇಂದು ಮನೆ ಖಾಲಿ ಮಾಡಿಕೊಂಡು ದೂರ ಹೋಗಿ ಬಿಡುತ್ತಾಳೆ. ಹಾಗೆಯೇ ಪುನರ್ವಿವಾಹ ಕೂಡಾ ವಿಧವೆಯೆ ಸಮಸ್ಯೆಯ ಮೇಲೆ ಬೆಳಕು ಚೆಲ್ಲುತ್ತದೆ. ನಿರೂಪಕ ವಿಧುರ ಮದುವೆಯಾಗುವ ಹುಡುಗಿ ರಾಜಿ ಬಾಲ ವಿಧವೆ ಎಂದು ತಿಳಿದಾಗ ಅಮಂಗಳ ಎಂದು ಭಾವಿಸುತ್ತಾನೆ. ನಂತರ ಬದಲಾಗಿ ವಿಧವೆಯರ ಒಳಿತಿಗಾಗಿ ದುಡಿಯುತ್ತೇನೆ ಎನ್ನುತ್ತಾನೆ.

ಗೌರಮ್ಮನವರು 20ನೇ ಶತಮಾನದ ಮಧ್ಯಭಾಗದಲ್ಲಿ ಕಥೆ ಬರೆದವರು. ಇವರು ಕೇವಲ 7 ವರ್ಷ ತಮ್ಮನ್ನು ಬರಹಕ್ಕೆ ತೊಡಗಿಸಿಕೊಂಡಾಗ್ಯೂ ಬರೆದ ಇಪ್ಪತ್ತೊಂದು ಕಥೆಗಳಲ್ಲಿ ಬಾಲ್ಯವಿವಾಹ, ವಿಧವಾ ವಿವಾಹ, ಜಾತಿ ಪದ್ಧತಿ, ವೇಶ್ಯಾವಾಟಿಕೆ ಹಿಂದೂ-ಮುಸ್ಲಿಂ ಐಕ್ಯತೆ, ಇಂತಹ ಅನೇಕ ವಿಚಾರಗಳನ್ನು ತಮ್ಮ ಕಥೆಯ ಹಂದರಗಳಲ್ಲಿ ಒಳಗೊಂಡುದನ್ನು ನಾವು ಕಾಣಬಹುದಾಗಿದೆ, ಅವರ ಸುಪ್ರಸಿದ್ಧ ಕಥೆ 'ಆಹುತಿ' ವರದಕ್ಷಿಣೆಯ ಸಮಸ್ಯೆಯನ್ನು ಬಿಚ್ಚಿ ಇಡುತ್ತದೆ. ಇಂತಹ ವಿಚಾರಗಳನ್ನು ಕಥೆಯ ಹಂದರದೊಳಗೆ ಹೇಳುವಾಗ ಕೆಲವಾರು ಕಡೆ ಉಪದೇಶ, ಭಾಷಣಗಳು ಕಾಣಿಸಿಕೊಂಡರೂ, ಒಟ್ಟಾಗಿ ನೋಡುವಾಗ ಘೋಷಣೆ, ಗದ್ದಲಗಳು ಇವರ ಕಲಾಕೃತಿಯನ್ನು ಕೆಡಿಸಿಲ್ಲ. ಸರಳವಾಗಿ ಕಥೆ ಹೇಳುವ ಇವರು ಕೆಲವು ಸಮಸ್ಯೆಗಳನ್ನು ಸುಲಭವಾಗಿ ಬಗೆ ಹರಿಸುವ ರೀತಿ ಕಂಡು

ಸ್ತರದ ಘರ್ಷಣ, ಮಾನವೀಯ ಅನುಕಂಪಗಳನ್ನು ಹಿಡಿದಿಡುತ್ತವೆ. 'ಅಪರಾಧಿ ಯಾರು'? ಕಥೆಯಲ್ಲಿ ನಾಗೇಶರಾಯರಿಂದ ಅತ್ಯಾಚಾರಕ್ಕೊಳಗಾದ ಪಾರ್ವತಿಯನ್ನು ಎಲ್ಲರೂ ಮನೆಯಿಂದ ಹೊರಹಾಕಿದಾಗ ಉನ್ನೀಸಾ ಆಕೆಗೆ ಬಾಗಿಲು ತೆರೆಯುತ್ತಾಳೆ. ಆಕೆ ಬಾವಿಗೆ ಹಾರಿ ಸಾಯುವುದನ್ನು ತಪ್ಪಿಸುತ್ತಾಳೆ. ಪಾರ್ವತಿ ಮುಸಲ್ಮಾನ್ ಜಾತಿಗೆ ಸೇರಿ ರಜಿಯಾ ಆಗುತ್ತಾಳೆ. ಆಕೆ ರಜಿಯಾ ಆಗಿರುವುದಕ್ಕೆ ಯಾರು ಕಾರಣ ? ಯಾರು ಆಕೆಯನ್ನು ಬಾವಿಗೆ ನೂಕಿದರು ? ಯಾರು ರಕ್ಷಿಸಿದರು? ಎಂಬ ಮಾನವೀಯ ನೆಲೆಯ ಪ್ರಶ್ನೆಗಳನ್ನು ನಿರೂಪಕಿ ಎತ್ತುತ್ತಾಳೆ. ನಂತರ ಕಥೆಯ ಕೊನೆಯ ಭಾಗ ಪತ್ರಿಕೆಯೊಂದರ ವರದಿಯ ಮೂಲಕ ಕೊನೆಯಾಗುತ್ತದೆ. ' ಮೊನ್ನೆ ದಿನ ಹಿಂದೂ ರಮಣಿಯೊಬ್ಬಳು ಮುಸಲ್ಮಾನ್ ಧರ್ಮ ಸ್ವೀಕರಿಸಿದುದು ಊರಿನ ಹಿಂದೂಗಳಿಗೆಲ್ಲಾ ಬಹಳ ವಿಷಾದವನ್ನುಂಟು ಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳು-ವುದಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂಧರ್ಮದ ರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು'.

ಹೀಗೆ ಕಥೆಯಲ್ಲಿ ಒಂದು ವಿಡಂಬನೆಯನ್ನು ಎತ್ತಿ ಹಿಡಿಯುತ್ತಾರೆ. "ಹೋಗಿಯೇ ಬಿಟ್ಟಿದ್ದ" ಕಥೆ ಕೂಡಾ ಲತೀಫ್ ಹಾಗೂ ಹಿಂದೂ ಯುವಕನೊಬ್ಬನ ದುರಂತ ಕಥೆ. ರೈಲಿನಲ್ಲಿ ಕಥೆ ಹೇಳುವ ಮುದುಕ ತನ್ನ-ಲತೀಫ್‌ಳ ದುರಂತ ಕಥೆ ಹೇಳಿ ನಂತರ ರೈಲಿನಡಿ ಬಿದ್ದು ಸಾಯುತ್ತಾನೆ.

'ಮುನ್ನಾದಿನ'- ಗೌರಮ್ಮನವರು ಸಾಯುವ ಹಿಂದಿನ ದಿನ ಬರೆದ

ಕಥೆ. ಇದು ಕಾಡ ಮೇಸ್ತ್ರಿಯ ಕಥೆ. ಈತನು ಚಿಕ್ಕ ಹುಡುಗನಿರುವಾಗ 'ದೊರೆಯ ಸ್ವಂತ ಬಾಯ್' ಆಗಿ ಕ್ರಿಶ್ಚಿಯನ್ ಧರ್ಮಕ್ಕೆ ಸೇರುತ್ತಾನೆ. ನಂತರ ಹುಸೇನ್ ಬೀಬಿಯ ಪ್ರೀತಿಗಾಗಿ ಮುಸ್ಲಿಂನಾಗುತ್ತಾನೆ. ಹೀಗೆ ಆತಂಕ, ಸದ್ದು-ಗದ್ದಲ ವಿಲ್ಲದೇ 'ಜೋಸೆಫ್ ಕಾಡ' ನಾಗುವ ಕಾಡ ಮೇಸ್ತ್ರಿ ಕೊನೆಗೆ 'ಇಸ್ಮಾಯಿಲ್ ಕಾಡ ಕಾಕ' ನಾಗುತ್ತಾನೆ.

ಹೀಗೆ ಜಾತಿ, ಧರ್ಮ, ಲಿಂಗಭೇದ, ವರದಕ್ಷಿಣೆ ಎಲ್ಲವನ್ನೂ ಸರಳವಾಗಿ ಕಥೆಯಲ್ಲಿ ಹೇಳಿರುವ ಗೌರಮ್ಮನವರು ಬೇಂದ್ರೆ, ಕಾರಂತ್, ಇಂತವರೆಲ್ಲರ ಸಂಪರ್ಕ ಇಟ್ಟು ಕೊಂಡವರು. ಗಾಂಧೀಜಿಯವರು ತಮ್ಮ ಮನೆಗೆ ಬರಲೇಬೇಕೆಂದು ಹಟ ಮಾಡಿ ತಮ್ಮ ಮನೆಗೆ ಕರೆಸಿಕೊಂಡು ತಮ್ಮ ಒಡವೆಗಳನ್ನೆಲ್ಲ ದಾನವಿತ್ತವರು. ಇದನ್ನು ಗಾಂಧೀಜಿಯವರು 'ಹರಿಜನ' ಪತ್ರಿಕೆಯಲ್ಲಿ ಉಲ್ಲೇಖಿಸಿದ್ದರು. ಗಾಂಧೀಜಿಯವರು ಕಿತ್ತಲೆ ಹಣ್ಣು ನೀಡಿ ಆಕೆ ಉಪವಾಸ ನಿಲ್ಲಿಸಬೇಕೆಂದೂ, ಆಕೆಯ ಮನೆಗೆ ಬರುತ್ತೇನೆಂದು ಹೇಳಿ-ಆಕೆಯ ಮನೆಗೆ ಹೋದುದಾಗಿ, ಅಲ್ಲಿ ಗೌರಮ್ಮನವರು ಒಡವೆ ನೀಡಿದುದಾಗಿ ತಿಳಿದು ಬರುತ್ತದೆ. ಕೊನೆಯ ತನಕ ಖಾದಿ ಬಟ್ಟೆ ಧರಿಸುತ್ತಿದ್ದ ಗೌರಮ್ಮನವರ ಅಂತರಾಳದ ಗಟ್ಟಿತನ ಎಲ್ಲರಿಗೂ ಬೆರಗು ಹುಟ್ಟಿಸುವಂತಹದು.

ಬರಡು ಕೊರಡ ಕೊನೆಯೊಳಿಂದು

ಚಿಗುರು ಕೊನರಿ ಕಾಂಬುದೊಂದು

ಹೆಣ್ಣು ಜೀವವೊಂದು ಎರೆದುದಿದಕೆ

ನೊಂದ ಕಂಬನಿ

ಕಳೆದ ಕೊಡವು ಒಡೆದರೇನು ?

ಮಿಡಿದ ತಂತಿ ಕಡಿದರೇನು ?

ನುಡಿದ ನಾದ ನುಡಿಸದೇನು

ಬೀಣೆಯೊಡಲು ಕಾಹಿನಿ

ಪಿ.ವಿ.ಆ

ಗೌರಮ್ಮನವರ ಅಕಾಲಿಕ ಸಾವು ಅಂದಿನ ಸಾಹಿತ್ಯ ಗಣ್ಯರನ್ನು ಅತ್ಯಂತ ಶೋಕಕ್ಕೀಡು ಮಾಡಿದುದು ಕಂಡು ಬರುತ್ತದೆ. ಅಷ್ಟರ ಮಟ್ಟಿಗೆ ಗೌರಮ್ಮನವರು ತಮ್ಮ ಕಥೆಗಳ ಮೂಲಕ ತಮ್ಮದೇ ವಿಶಿಷ್ಟ ಛಾಪನ್ನು ಕನ್ನಡ ಸಾಹಿತ್ಯದಲ್ಲಿ ಮೂಡಿಸಿದ್ದರು. ಇವರ ಕಥೆಯ ಸಂಗ್ರಹ 'ಕಂಬನಿ'ಗೆ ಅವರ ಮರಣಾನಂತರ ಮುನ್ನುಡಿ ಬರೆದ ಬೇಂದ್ರೆಯವರು ಕೊನೆಯಲ್ಲಿ ಹೀಗೆ ಹೇಳುತ್ತಾರೆ.

'ಕತೆಗಳಲ್ಲಿ ಕಟತ್ವವಿದ್ದರೂ ರೊಚ್ಚಿಲ್ಲ ; ಸೋದ್ದೇಶ ಲೇಖನದ ಸೂಚನೆಯಿದ್ದರೂ ಅವಾಸ್ತವ ಆರ್ಭಟೆಯಿಲ್ಲ; ಕತೆಯು ನೈಜ್ಯವನ್ನು ಮರೆಮಾಚಿಲ್ಲ. - ಎಲ್ಲೆಲ್ಲಿಯೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾ ಗುಚ್ಛವು 'ಶ್ರೀನಿವಾಸ' 'ಆನಂದ' ರ ಕತೆಗಳನ್ನು ಓದಿದ ವಾಚಕರಿಗೆ ಮನೋವಿಶ್ಲೇಷಣಾತ್ಮಕ ಕತೆಗಳ ಮಾದರಿಯಾಗಿ ಹೃದಯಂಗಮವಾಗುವುದೆಂದು ನಾನು ನಂಬಿದ್ದೇನೆ". (ಪು 213, ಜೀವನ ಪ್ರೀತಿ).

ಗೌರಮ್ಮನವರು ಆರು ವರ್ಷದ ಮಗುವಾಗಿರುವಾಗ ತಾಯಿಯನ್ನು ಕಾಶಿಯಲ್ಲಿ ಕಳೆದುಕೊಂಡರು. ಹಾಗೆಯೇ ತಮ್ಮ ಚಿಕ್ಕ ಮಗುವನ್ನು ಅನಾಥನನ್ನಾಗಿಸಿ ತಾವು ವಾಸವಾಗಿದ್ದ ಮನೆಗೆ ಕೇವಲ ಮೂರು ಮೈಲಿ ಅಂತರದಲ್ಲಿ ಹರಿಯುತ್ತಿದ್ದ ಹರದೂರು ಹೊಳೆಯಲ್ಲಿ ತೇಲಿಹೋದರು. ಕೇವಲ 21 ಕಥೆಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದ ಗೌರಮ್ಮನವರ ಕಥೆಗಳ ಸರಳತನ ಯಾರಿಗಾದರೂ ಸ್ಫೂರ್ತಿದಾಯಕ. ಈ ಲೇಖಕಿಯ ಬಗ್ಗೆ 'ಜೀವನ ಪ್ರೀತಿ' ಎಂಬ ಪುಸ್ತಕ ಹೊರತಂದ ಕನ್ನಡ ಪುಸ್ತಕ ಪ್ರಾಧಿಕಾರ ಹಾಗೂ ಸಂಪಾದಕ ಕಾಳೇಗೌಡ ನಾಗವಾರ ಸ್ತುತ್ಯಾರ್ಹರು.

ಅಸಹನೆ, ಸಿಟ್ಟು ಮತ್ತು ಸಾಮಾಜಿಕ ಅನಿಷ್ಟಗಳ ಬಗೆಗಿನ ಕಳಕಳಿ ಕಥಾ ಚೌಕಟ್ಟಿನ ಒಳಗೆ ಕಲಾರೂಪ ಪಡೆದುಕೊಳ್ಳುವುದು : ಆ ಕಾರಣ ಗೌರಮ್ಮನ ಕತೆಗಳು ಇಂದಿಗೂ ತಾಜಾ ಅನ್ನಿಸುತ್ತವೆ. ಅಲ್ಲಿನ ಸರಳತನ ಅನನ್ಯವಾದುದು. ನಿರಾಡಂಭರ ಮತ್ತು ನೇರ ಬರವಣಿಗೆ ಶೈಲಿ. ಕಥೆಗಳ ಆಧಾರದ ಮೇಲೆ ಗೌರಮ್ಮನ ಚಿತ್ರ ಬರೆಯುವುದಾದರೆ ಆಕೆ ಜಾತ್ಯಾತೀತ ನಿಲುವಿನ ಸ್ತ್ರೀ ಸಮಾನತಾವಾದಿ ಮತ್ತು ಮಾನವೀಯ ಅಂತಃಕರಣ ತುಂಬಿದ ಮಹಿಳೆಯಾಗಿ ಕಾಣಬರುತ್ತಾರೆ. ಜಾತಿ, ಮಡಿವಂತಿಕೆ ಮತ್ತು ಮತಗಳ ಕಲುಷಿತ ವಾತಾವರಣದಿಂದ ಕಿಂಚಿತ್ತು ಮಲಿನಗೊಳ್ಳದ ಮನಸ್ಸಿನವರಾಗಿರಬೇಕು ಅನ್ನಿಸುತ್ತದೆ.

ಸುಚೇತನ ಸ್ವರೂಪ

# 'ಬೇವಿನ ಪೇಟೆಂಟ್ ಬೇವಿಗೇ' ಇರಬೇಕು

- ವಂದನಾಶಿವ

**ವಂದನಾಶಿವರವರು 'ದಿ ರಿಸರ್ಚ್ ಫೌಂಡೇಶನ್ ಫಾರ್ ಸೈನ್ಸ್, ಟೆಕ್ನಾಲಜಿ ಮತ್ತು ಎಕಾಲಜಿ' ಸಂಸ್ಥೆಯ ಸಂಸ್ಥಾಪಕರಲ್ಲಿ ಒಬ್ಬರು. ಈ ಸಂಸ್ಥೆ ಯುರೋಪಿನ ಪೇಟೆಂಟ್ ಸಂಸ್ಥೆಯಲ್ಲಿ ಬೇವಿನ ಬಗೆಗಿನ ಪೇಟೆಂಟ್ಸ್‌ನ್ನು ವಾಪಸ್ಸು ತೆಗೆದುಕೊಳ್ಳುವಂತೆ ಮಾಡುವಲ್ಲಿ ಬಹಳ ಮುಖ್ಯ ಪಾತ್ರ ವಹಿಸಿ ಕೆಲಸ ಮಾಡಿದೆ. ಈಕೆ-ಬೆಂಗಳೂರಿನ ವಾಯಿಸಸ್ ಜೊತೆ ಮಾತನಾಡಿ, ನೀಡಿದ ಸಂದರ್ಶನದ ಆಯ್ದ ಭಾಗಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.**

ಮೇ 10, 2000 ರ ದಂದು ಯುರೋಪಿಯನ್ ಪೇಟೆಂಟ್ ಸಂಸ್ಥೆಯವರು ಅಮೇರಿಕಾದ ವ್ಯವಸಾಯ ಖಾತೆ ಹಾಗೂ ಅವರ ಒಂದು ಬೃಹತ್ ಮಲ್ಟಿ ನ್ಯಾಶನಲ್ ಕಂಪನಿಗೆ ನೀಡಿದ್ದ ಬೇವಿನ ಪೇಟೆಂಟನ್ನು ಅನೂರ್ಜಿತಗೊಳಿಸಿದರು. ಈ ಪೇಟೆಂಟ್ ಸಂಖ್ಯೆ 0436257 B1. ಈ ಪೇಟೆಂಟನ್ನು ಅನೂರ್ಜಿತಗೊಳಿಸಲು ಐದು ವರ್ಷ ಹೋರಾಟ ನಡೆಸಬೇಕಾಯಿತು. ಈ ವ್ಯವಸಾಯ ಖಾತೆ ಹಾಗೂ ಡಬ್ಲ್ಯು. ಆರ್ ಗ್ರೇಸ್ ಕಂಪನಿ ಸುಳ್ಳು ಹಕ್ಕುದಾರಿಕೆಯನ್ನು ಸ್ಥಾಪಿಸಿ ಬೇವಿನ ಮೇಲೆ ಪೇಟೆಂಟ್ ಪಡೆದಿದ್ದರು. 1995 ಜೂನ್‌ನಲ್ಲಿ ಮೂವರು ಈ ಪೇಟೆಂಟ್ ನೀಡಿದ್ದನ್ನು ಪ್ರಶ್ನಿಸಿ ಯುರೋಪಿಯನ್ ಪೇಟೆಂಟ್ ಸಂಸ್ಥೆಯಲ್ಲಿ ಕಾನೂನು ಮೂಲಕ ವಿರೋಧ ಸೂಚಿಸಿದ್ದರು. ವಂದನಾಶಿವರವರು ದೆಹಲಿಯ ವಿಜ್ಞಾನ , ತಾಂತ್ರಿಕ, ನೈಸರ್ಗಿಕ ಸಂಪನ್ಮೂಲ ಪಾಲಿಸಿ ಸಂಶೋಧನಾ ಸಂಸ್ಥೆಯನ್ನು ಪ್ರತಿನಿಧಿಸಿದ್ದರೆ, ಬ್ರುಸಲ್ಸ್‌ನ ಯುರೋಪಿಯನ್ ಪಾರ್ಲಿಮೆಂಟಿನ ಗ್ರೀನ್ ಪೀಸ್ ಪರವಾಗಿ ಮಾಗ್ದಾ ಆಲ್‌ವೋಟ್ ಹಾಗೂ ಜರ್ಮನಿಯಲ್ಲಿಯ ಅಂತರ್ ರಾಷ್ಟ್ರೀಯ ಆರ್ಗಾನಿಕ್ ವ್ಯವಸಾಯ, ಚಳುವಳಿಗಳ ಫೆಡರೇಶನ್ - ಈ ಮೂರು ಗುಂಪುಗಳು ಬೇವಿನ ಬಗ್ಗೆ ದೊಡ್ಡ ಸಹಿ ಸಂಗ್ರಹಣೆಯ ಕ್ಯಾಂಪೈನ್ ನಡೆಸಿದವು.

ಈ ಕ್ಯಾಂಪೇನ್‌ನಲ್ಲಿ ಸರ್ಕಾರೇತರ ಸಂಸ್ಥೆಗಳೂ ಹಾಗೂ ಕೆಲವು ವ್ಯಕ್ತಿಗಳು ಇದ್ದರು. 1993ರಲ್ಲಿ ಈ ಚಳುವಳಿ ಭಾರತದಲ್ಲಿ ಪ್ರಾರಂಭವಾಯಿತು. ಮೂರನೇ ಜಗತ್ತಿನ ಸ್ಥಳೀಯ ಜ್ಞಾನ ಸಂಪತ್ತು ಹಾಗೂ ಸಂಪನ್ಮೂಲಗಳನ್ನು ಪಾಶ್ಚಿಮಾತ್ಯರ ಲೂಟಿಯಿಂದ ರಕ್ಷಿಸುವುದಕ್ಕೋಸ್ಕರ ಪ್ರಪಂಚದಾದ್ಯಂತ ಅರಿವು ಮೂಡಿಸುವ ಕ್ರಿಯೆ ಭಾರತದಲ್ಲಿ ಪ್ರಾರಂಭವಾಯಿತು. ಪಾಶ್ಚಿಮಾತ್ಯರ ಲೂಟಿ ಇನ್ನೂ ಹೆಚ್ಚಾದದ್ದು ಡಬ್ಲ್ಯು ಟಿ.ಓ. ಹಾಗೂ ಟ್ರಿಪ್ಸ್ ಸಂಸ್ಥೆಗಳ ಅಡಿಯಲ್ಲಿ ಪ್ರಾರಂಭವಾಗಿದ್ದ ಬೌದ್ಧಿಕ ಆಸ್ತಿ ಹಕ್ಕುಗಳ ಯೋಜನೆಯಿಂದಾಗಿ. ಬೇವಿನ ಪೇಟೆಂಟ್ - ಮೊದಲನೆಯ ಪ್ರಕರಣ. ಈ ಪ್ರಕರಣದಲ್ಲಿ ಯುರೋಪ್ ಮತ್ತು ಅಮೇರಿಕಾದ ಪೇಟೆಂಟ್ಸ್‌ಗಳನ್ನು ಜೈವಿಕ ಲೂಟಿಯ ಆಧಾರದ ಮೇಲೆ ಸವಾಲು ಎಸೆಯಲಾಯಿತು. ಈ ಸಹಿಸಂಗ್ರಹಣೆಯ ಕ್ಯಾಂಪೇನ್ ಪ್ರಾರಂಭಗೊಂಡದ್ದು ಸಂಶೋಧನಾ ಸಂಸ್ಥೆಯಿಂದ. ಮೇ 2000 ದಷ್ಟರೊಳಗೆ 500,000 ಸಾವಿರ ಸಹಿಗಳನ್ನು ವಿದ್ಯಾರ್ಥಿಗಳು, ಶಿಕ್ಷಕರು, ಬುದ್ಧಿ ಜೀವಿಗಳು, ರೈತರು, ಹೆಂಗಸರು ಮತ್ತು ಇತರರಿಂದ ಸಂಗ್ರಹಣೆ ಮಾಡಲಾಗಿತ್ತು. ಈ ಸಹಿ ಸಂಗ್ರಹಣೆಯ ಚಳುವಳಿ ಬೇವಿನ ಪೇಟೆಂಟನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಒತ್ತಾಯ ಮಾಡಿ ಬೇಡಿಕೆಯನ್ನು ಇತ್ತಿತ್ತು. ಇದು ಅತ್ಯಂತ ದೊಡ್ಡ ಕೆಲಸವಾಗಿತ್ತು. 500,000 ಸಹಿ ಸಂಗ್ರಹಣೆಗಳನ್ನು ಯುರೋಪಿಯನ್ ಪೇಟೆಂಟ್ ಸಂಸ್ಥೆಗೆ ಮೇ 10, 2000 ದಂದು ನೀಡಲಾಯಿತು. ನಂತರದ ದಿನವೇ ಬೇವಿನ ಪೇಟೆಂಟನ್ನು ಅನೂರ್ಜಿತಗೊಳಿಸಲಾಯಿತು. ಯುರೋಪಿಯನ್ ನ್ಯಾಯಾಲಯದಲ್ಲಿ ಪೇಟೆಂಟ್‌ನ ಪ್ರಕರಣವನ್ನು ನಡೆಸಲು ಯುರೋಪಿನ ಸಹಭಾಗಿಗಳು ಖರ್ಚು-ವೆಚ್ಚಗಳನ್ನು ನೋಡಿಕೊಂಡರು. ವೌಖಿಖಿ ಹಿಯರಿಂಗ್ ಮ್ಯೂನಿಚ್‌ನಲ್ಲಿ ಇದ್ದಾಗ - ಅಂದರೆ ಮೇ 10, 11, 2000 ದಂದು ಹೇಳಿಕೆ ನೀಡಲು ವ್ಯವಸಾಯ ನಿಪುಣರನ್ನು ಹಾಗೂ ಆರ್ಗಾನಿಕ್ ರೈತರನ್ನು ಸಂಶೋಧನಾ ಸಂಸ್ಥೆಯವರು ಕರೆದುಕೊಂಡು ಹೋಗಿದ್ದರು.

ಈ ಪೇಟೆಂಟ್ ಜಾರಿಯಲ್ಲಿ ಇದ್ದಿದ್ದರೆ ನಮ್ಮಂತಹ ದೇಶಗಳ ಮೇಲೆ ಏನು ಪರಿಣಾಮ ಆಗುತ್ತಿತ್ತು ಎಂಬುದನ್ನು ವಂದನಾಶಿವರವರು ವಿವರಿಸುತ್ತಾರೆ. ಇದು ಒಂದು ಪೂರ್ವಗ್ರಹ ಪೀಡಿತ ಭಾವನೆಯನ್ನು ಹಬ್ಬಿಸುತ್ತಿತ್ತು. ಡ್ಲಬ್ಲ್ಯು ಆರ್ ಗ್ರೇಸ್‌ನಂತಹ ದೊಡ್ಡ ದೊಡ್ಡ ಕಂಪನಿಗಳು ಈ ರೀತಿಯ ಪೂರ್ವ ಗ್ರಹ ಪೀಡಿತ ಭಾವನೆಯನ್ನು ಹಬ್ಬಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತಿದ್ದರು. ಪೇಟೆಂಟ್ ಮಾಡುವುದರಿಂದ ಪ್ರಕೃತಿ

ಹಾಗೂ ಸ್ಥಳೀಯ ಸಮುದಾಯದ ಕೊಡುಗೆಯನ್ನು ಇವು ತಿರಸ್ಕರಿಸುತ್ತವೆ.

ನೈಸರ್ಗಿಕವಾಗಿರತಕ್ಕಂತಹ ಸಂಪನ್ಮೂಲಗಳು ಪ್ರಕೃತಿಯ ಹಾಗೂ ಪ್ರಕೃತಿಯ ಜೊತೆ ಸೌಹಾರ್ದದಿಂದ ಬದುಕುವ ಸಮುದಾಯಗಳು ಒಟ್ಟಿಗೇ ಸೇರಿ ನೀಡಿದ ಉತ್ಪಾದನೆಗಳಾಗಿರುತ್ತವೆ. ಇವರಿಬ್ಬರ ಕೊಡುಗೆಯನ್ನು ಕಂಪನಿಗಳು ತಿರಸ್ಕರಿಸುತ್ತವಲ್ಲದೇ ಜನರಿಂದ ಅವರ ಸಂಪನ್ಮೂಲಗಳನ್ನು ಕಸಿದುಕೊಳ್ಳುತ್ತವೆ. ತಾವು ಹೊಸದೇನನ್ನೋ ಕಂಡು ಹಿಡಿದಿದ್ದೇವೆಂದು ಭ್ರಮಿಸಿ ಹಕ್ಕುಗಳನ್ನು ತೆಗೆದುಕೊಳ್ಳುತ್ತವೆ.

ಬೇವಿನ ಪೇಟೆಂಟ್‌ನಿಂದ ಆಗುತ್ತಿದ್ದ ಅನಾಹುತವೆಂದರೆ ಸ್ಥಳೀಯ ಸಮುದಾಯಗಳು ಉಚಿತವಾಗಿ ಬಳಸುತ್ತಿದ್ದ ಮರದ ಉತ್ಪನ್ನಗಳನ್ನು - ರಫ್ತು ಮಾಡಲು ಅಥವಾ ದೇಶದೊಳಗೇ ಹೆಚ್ಚು ಬೆಲೆಗೆ ಮಾರಲು ದೊಡ್ಡ ದೊಡ್ಡ ಕೈಗಾರಿಕೆಗಳಿಗೆ ನೀಡುತ್ತಿದ್ದರು. ಈ ಹಂತದಲ್ಲಿ ಒಂದಿಷ್ಟು ಕಂಪನಿಗಳು ಪೇಟೆಂಟ್ ಮೂಲಕ ಬೇವಿನ ಕಚ್ಚಾ ವಸ್ತುವಿಗೆ ಕೈ ಹಾಕಿ ಎಲ್ಲಾ ಉತ್ಪಾದನೆಯ ವಿಧಾನಗಳನ್ನು ತಮ್ಮ ಕೈ ವಶ ಮಾಡಿಕೊಳ್ಳುತ್ತಿದ್ದರು. ಇಂದು ಬೇವಿನ ಬೀಜದ ಬೆಲೆ ಅದರ ಮೌಲ್ಯದಿಂದಾಗಿ ಹೆಚ್ಚಾಗಿದೆ. ಕಳೆದ 20 ವರ್ಷಗಳಲ್ಲಿ ಟನ್‌ಗೆ 300 ರೂ ನಿಂದ 3000 ಹಾಗೂ 4000 ವರೆಗೆ ಹೆಚ್ಚಾಗಿದೆ.

ಸ್ಥಳೀಯ ರೈತ ಕಾರ್ಖಾನೆಯ ಬೆಲೆಯನ್ನು ಕೊಟ್ಟು ಬೇವಿನ ಬೀಜ ಕೊಳ್ಳಲಾರ. ಉಚಿತವಾಗಿದ್ದ, ಎಲ್ಲರೂ ಬಳಸಿಕೊಳ್ಳುತ್ತಿದ್ದ, ಎಲ್ಲರಿಗೂ ಲಭ್ಯವಿದ್ದ ಬೇವಿನ ಮರ ಪೇಟೆಂಟ್‌ನಿಂದಾಗಿ ಪಾಶ್ಚಾತ್ಯ ಕಾರ್ಪೋರೇಶನ್‌ಗಳ ಖಾಸಗಿ ಆಸ್ತಿಯಾಗಿ ಪರಿಣಮಿಸುತ್ತಿದ್ದವು.

ಕಳೆದ ದಶಕದಿಂದ ರಾಸಾಯನಿಕ ಗೊಬ್ಬರ, ಹಾಗೂ ಕ್ರಿಮಿನಾಶಕಗಳ ವೈಪರಿತ್ಯ ಮನಗಂಡು ಪರಿಸರ ಪ್ರೇಮಿಗಳಾಗಿರುವ ಜನ ನೈಸರ್ಗಿಕ ಕಿಮಿನಾಶಕಗಳು, ನೈಸರ್ಗಿಕ ಗೊಬ್ಬರಗಳತ್ತ ಮುಖ ಮಾಡುತ್ತಿದ್ದಾರೆ. ಮೂರನೇ ಜಗತ್ತಿನ ಜ್ಞಾನ, ಹಾಗೂ ಅವರ ಅಗತ್ಯಗಳನ್ನು, ಹಕ್ಕುಗಳನ್ನು, ಬೇವಿನ ಪೋಷಕರನ್ನು ತಿರಸ್ಕರಿಸಿದ ಅವರು ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ. ಬೇವಿನ ಪೇಟೆಂಟ್ ಮೂರನೇ ಜಗತ್ತಿನ ಸಮುದಾಯದ ಹಕ್ಕು ಅಗತ್ಯ, ಜ್ಞಾನವನ್ನು ನಾಶಮಾಡುವ ವಿಧಾನವಾಗಿದೆ. ಬೇವಿನ ಮರವನ್ನೇ ಪೇಟೆಂಟ್ ಮಾಡಲಿಕ್ಕೆ ಆಗುವುದಿಲ್ಲ. ಯಾಕೆಂದರೆ ಇದು ಮಿಲಿಯಾಂತರ ವರ್ಷಗಳಿಂದ ಅಸ್ತಿತ್ವದಲ್ಲಿ ಇದೆ. ಹಾಗೂ ಇದರ ಬಳಕೆಯ ಬಗ್ಗೆ ಪ್ರಾಚೀನ ಭಾರತದ ಪುಸ್ತಕದಲ್ಲಿ ಬರೆಯಲಾಗಿದೆ. ಹಾಗಾಗಿ ಬೇವಿನ ಮರದ ಬದಲು, ಅದರ ಉತ್ಪನ್ನಗಳನ್ನು ಪೇಟೆಂಟ್ ಮಾಡಲಾಗುತ್ತಿದೆ. ಇದು ಒಂದು ಅರ್ಥದಲ್ಲಿ ಬೇವಿನ ಮರವನ್ನೇ ಪೇಟೆಂಟ್ ಮಾಡಿದಂತೆ.

ವಂದನಾಶಿವರವರ ಪ್ರಕಾರ ನೈಸರ್ಗಿಕ ಉತ್ಪನ್ನಗಳ ಮೇಲೆ ಯಾವ ರೀತಿಯ ಹೊಸ ಸಂಶೋಧನೆಗಳು ನಡೆದರೂ, ಅದು ಯಾವ ರೂಪದಲ್ಲಿದ್ದರೂ ಸಹ, ಯಾವುದೇ ರೀತಿಯ ಪೇಟೆಂಟನ್ನು ಈ ವಸ್ತುಗಳಿಗೆ ಕೊಡಬಾರದು. ಅದು ಬೇವು, ಒಂದೆಲಗ, ತುಳಸಿ ಅಥವಾ ಹಳದಿ ಅಥವಾ ಯಾವುದೇ ರೀತಿಯ ನೈಸರ್ಗಿಕ ವಸ್ತುವಾಗಿರಬಹುದು. ಬೇವು ಅಥವಾ ಅದರ ಯಾವುದೇ ಭಾಗಗಳನ್ನು ಪೇಟೆಂಟ್ ಮಾಡಬಾರದು ಎಂದು ಯಾವತ್ತಿನಿಂದಲೂ ಹೇಳಲಾಗುತ್ತಿದೆ. ಈ ಪೇಟೆಂಟ್ ಬೇವಿನ ಮರದ ಹಾಗೂ ಅದರೊಳಗಿನ ಪದಾರ್ಥಗಳಿಲ್ಲದೇ ಅಸ್ತಿತ್ವದಲ್ಲಿ ಚಲಾವಣೆಯಾಗಲಾರದು. ಅಂದರೆ ಬೇವಿನೊಳಗಿನ ಪದಾರ್ಥ, ಅದರೊಳಗಿನ ಕೆಲವು ಶಿಸ್ತುಗಳಿಗೆ ಹೊರತಾಗಿ ಬೇವಿನ ಯಾವುದೇ ಉತ್ಪಾದಕ ವಸ್ತು ಇರಲಾರದು. ಬೇವಿನ ನೈಸರ್ಗಿಕವಾದ ಕೀಟನಾಶಕ ಗುಣಗಳಾಗಲೀ, ಫಂಗಿಸೈಡ್‌ಗಳಾಗಲೀ ಮನುಷ್ಯರಿಂದ ಮಾತ್ರವೇ ಮಾಡಲಾದ ವಸ್ತುಗಳಿಲ್ಲ. ಇದನ್ನು ಗುರುತಿಸುವುದು ತುಂಬಾ ಮುಖ್ಯ.

ಬೇವಿನ ಮರ ತಾನಾಗಿಯೇ ಕ್ರಿಮಿನಾಶಕ ಗೊಬ್ಬರಕ್ಕೆ ದೊಡ್ಡ ಕೊಡುಗೆ ನೀಡಿದೆ. ಪಾಶ್ಚಾತ್ಯ ಕಂಪನಿಗಳು ಬೇವಿನ ಕ್ರಿಯಾಶೀಲ ಗುಣಗಳನ್ನು ಹೊರತೆಗೆಯುವುದೇ 'ಹೊಸ ಸಂಶೋಧನೆ' ಎಂದು ಹೇಳಿಕೊಂಡಿದ್ದಾರೆ. ಬೇವಿನ ಗುಣಗಳನ್ನು ಈಚೆ ಎಳೆದು ಘನೀಕರಿಸುವುದೆಂದರೆ ಹೊಸ ಪದಾರ್ಥ ಕಂಡು ಹಿಡಿಯಲಾಗಿದೆ ಎಂದರ್ಥವಲ್ಲ. ಬೇವಿನ ಗುಣಗಳು ಪ್ರಕೃತಿಯ ಕೊಡುಗೆ. ಅವು ಬೇವಿಗೆ ಆಂತರಿಕವಾದವುಗಳು. ಇವುಗಳನ್ನು ಮನುಷ್ಯ ನಿರ್ಮಿತ ಎಂದು ನಾವು ಕರೆಯಲಿಕ್ಕೆ ಆಗುವುದಿಲ್ಲ.

ಈ ಬೇವಿನ ಪೇಟೆಂಟ್‌ನಲ್ಲಿ ತೆಗೆಯುವ ವಿಧಾನ ಹೊಸದೆಂದು ಹೇಳಿಕೊಳ್ಳಲಾಗಿತ್ತು. ಆದರೆ ಸತ್ಯವೆಂದರೆ ಈ ರೀತಿಯ ತೆಗೆಯುವಿಕೆ ಭಾರತದಲ್ಲಿ ಪ್ರಾಚೀನ ಪದ್ಧತಿ. ಇದನ್ನು ಗೃಹ ಕೈಗಾರಿಕೆ ಹಾಗೂ ಕೈಗಾರಿಕೆ ಎರಡರಲ್ಲಿ ಕೂಡಾ ಬಳಸಲಾಗುತ್ತಿತ್ತು. ಪಾಶ್ಚಿಮಾತ್ಯರು ಹೊಸದು ಎಂದು ಕರೆಯುವುದು ನಮ್ಮಲ್ಲಿನ ಹಳೆಯ ಪದ್ಧತಿಗಳನ್ನು. ಪೇಟೆಂಟ್ ಮಾಡಿದ ಕಂಪನಿಗಳು - ತಾವು ಬೇವಿನ ಮರವನ್ನು ಪೇಟೆಂಟ್ ಮಾಡಿಲ್ಲವೆಂದು ಹೇಳಿಕೊಂಡರು. ಆದರೆ ಬೇವಿನ ಒಳಗಿನ ತಿರುಳಿನ ಗುಣಗಳನ್ನು ತಾವು ಹೊರ ತೆಗೆದುದಾಗಿ ಅವರ ಹೇಳಿಕೆ. ಪೇಟೆಂಟ್ - ಸಣ್ಣ-

ಪುಟ್ಟ ಪರಿಷ್ಕರಣೆಗೆ ಸಂಬಂಧಪಟ್ಟದ್ದು. ಆದೂ ಬೇವನ್ನು ತೆಗೆಯುವ ವಿಧಾನದಲ್ಲಿ. ಬೇವಿನ ಮರ ಇಲ್ಲದಿದ್ದರೆ, ಅಥವಾ ಭಾರತದಲ್ಲಿ ಅದರ ಬಳಕೆಯ ಜ್ಞಾನವಿಲ್ಲದಿದ್ದರೆ ಪೇಟೆಂಟ್ ವಿಧಾನದಲ್ಲಿ ಅವರಿಗೆ ಲಾಭ ಪಡೆಯಲು ಸಾಧ್ಯವೇ ಇರುತ್ತಿರಲಿಲ್ಲ. ಹಾಗಾಗಿ ಬೇವಿನ ಪೇಟೆಂಟ್ ಬೇವಿಗೇ ಉಳಿಯಬೇಕು.

'ಬಯೋ ಡೈವರ್ಸಿಟಿ ಆ್ಯಕ್ಟ್' ಗೆ ಕೂಡಾ ಈ ರೀತಿಯ ನೈಸರ್ಗಿಕ ಸಂಪನ್ಮೂಲಗಳ ಲೂಟಿ ಹೊಡೆಯುವಿಕೆಯನ್ನು ತಡೆಗಟ್ಟಲು ಸಮರ್ಥವಾಗಿಲ್ಲ. ಈ ಕಾನೂನು ನೈಸರ್ಗಿಕ ಸಂಪನ್ಮೂಲಗಳ ಬಳಕೆಯನ್ನು ನಿಯಂತ್ರಿಸುತ್ತದೆಯೇ ಹೊರತು ಅದರ ರಕ್ಷಣೆ ಮಾಡುವುದಿಲ್ಲ.ಅಥವಾ ಜನರ ಹಕ್ಕುಗಳನ್ನು ರಕ್ಷಿಸುವುದಿಲ್ಲ.

ಕೃಷಿ - ನೈಸರ್ಗಿಕ ರೀತಿಯನ್ನು ರಕ್ಷಣೆ ಮಾಡುವ ಮುಖ್ಯ ಉದ್ದೇಶ ಇಟ್ಟುಕೊಂಡು 'ನವಧಾನ್ಯ' ಎಂಬ ಫಾರಂನ್ನು ವಂದನಾಶಿವರವರು ಪ್ರಾರಂಭಿಸಿದ್ದಾರೆ. ಇದರಲ್ಲಿ 2000 ಬಗೆಯ ಭತ್ತದ ಬೀಜ, 30 ಬಗೆಯ ಗೋಧಿ, 8 ಬಗೆಯ ಸಾಸಿವೆ, ಇನ್ನು ಮುಂತಾದ ಧಾನ್ಯ ಸಂರಕ್ಷಣೆ ಮಾಡಿದ್ದಾರೆ. ಇವುಗಳನ್ನೆಲ್ಲ 32 ಸಮುದಾಯ ಬ್ಯಾಂಕ್‌ಗಳಲ್ಲಿ ಭಾರತದ ವಿವಿಧೆಡೆಯಲ್ಲಿ ರಕ್ಷಿಸಲಾಗಿದೆ. ಶತಮಾನಗಳ ಕಾಲದಿಂದ ಪರಿಸರದ ಬೇಡಿಕೆಗಳನ್ನು ಪೂರೈಸಲು ಬಳಸಲಾದ ಹಲವಾದ ವಿಧಗಳು ಇದರಲ್ಲಿವೆ. ಇದರಲ್ಲಿ ಬಗರು ಭೂಮಿಗೆ ಬೇಕಾದ ವೈವಿಧ್ಯಮಯ ಬೀಜಗಳೂ ಇವೆ. ನೀರು ನಿಲ್ಲುವ ಜಾಗ, ಪ್ರವಾಹದ ಜಾಗೆಗೆ ಅನುಕೂಲವಾಗುವ ಬೀಜಗಳನ್ನೂ ಇಲ್ಲಿ ರಕ್ಷಿಸಲಾಗಿದೆ. ವ್ಯವಸಾಯಕ್ಕೆ, ಆರೋಗ್ಯಕ್ಕೆ ಲಾಭದಾಯಕವಾಗುವ ಬೀಜಗಳನ್ನು ಕೂಡಾ ಇಲ್ಲಿ ಸಂರಕ್ಷಣೆ ಮಾಡಲಾಗಿದೆ.

'ನವಧಾನ್ಯದ' ಇನ್ನೊಂದು ಉದ್ದೇಶವೆಂದರೆ ಸ್ಥಳೀಯ ಸಮುದಾಯಗಳಿಗೆ ನೆರವು ನೀಡುವಂತಹವುದು. ನಾಶವಾಗುತ್ತಿರುವ ವಿವಿಧ ಬಗೆಯ ಬೀಜಗಳನ್ನು ರಕ್ಷಿಸುವುದು. ಬೀಜಗಳ ನಾಶದಿಂದಾಗಿ ಜನರ ಆಹಾರದ ಭದ್ರತೆಗೆ ಧಕ್ಕೆ ಒದಗುತ್ತಿದೆ. 'ಹಸಿರು ಕ್ರಾಂತಿಯ' ತಾಂತ್ರಿಕತೆಗಳೂ ಕೂಡಾ ಜೆನೆಟಿಕ್ ಡೈವರ್‌ಸಿಟಿಯನ್ನು ನಾಶ ಮಾಡುತ್ತಿವೆ. ಈಗ ಬರುತ್ತಿರುವ ಬಯೋಟೆಕ್ನಾಲಜಿ ಕೂಡಾ ಹೊಸ ಬಗೆಯ ಒಂದೇ ತೆರನಾದ ತಳಿಯನ್ನು ಹುಟ್ಟು ಹಾಕುತ್ತದೆ. ಹೊಸ ಬೌದ್ಧಿಕ ಆಸ್ತಿ ಹಕ್ಕಿನ ಯೋಜನೆಗಳು ಪಾಶ್ಚಿಮಾತ್ಯ ಮಾರುಕಟ್ಟೆಯಲ್ಲಿ ರೂಪಿತವಾದವುಗಳು - ರೈತರ ಶೋಧನೆಯನ್ನು ಕಸಿದು ಕೊಳ್ಳತೊಡಗಿವೆ, ಅವರ ಹಕ್ಕುಗಳನ್ನು ನಾಶ ಮಾಡತೊಡಗಿವೆ ಹಾಗೂ ಕಾರ್ಪೋರೇಟರ ಸ್ವತ್ತುಗಳನ್ನಾಗಿ ಮಾಡತೊಡಗಿವೆ. ಈ ಹಂತದಲ್ಲಿ 'ನವಧಾನ್ಯ' ರೈತರ ಹಕ್ಕುಗಳನ್ನು ರಕ್ಷಿಸುವ, ನೈಸರ್ಗಿಕ ಬಯೋ ಡೈವರ್ಸಿಟಿ ಕಾಯುವ ಚಳುವಳಿಯನ್ನು ಹುಟ್ಟು ಹಾಕಿದೆ. ಈ ಬಗ್ಗೆ ಅರಿವು ಮೂಡಿಸುವುದು, ಸ್ಥಳೀಯ ಗುಂಪು, ಸಮುದಾಯಗಳಿಗೆ ಬೀಜ ಸಂರಕ್ಷಣೆ ಮಾಡುವಂತೆ ಪ್ರೋತ್ಸಾಹಿಸುವುದು, ಸ್ಥಳೀಯ ಸಮುದಾಯಗಳು ಸಮರ್ಥರಾದಾಗ ಅವರಿಗೆ ಮೇಲ್ವಿಚಾರಣೆ ಬಿಟ್ಟು ಅಲ್ಲಿಂದ ಕದಲುವುದು - ಇಂತಹ ಕಾರ್ಯಕ್ರಮಗಳನ್ನು 'ನವಧಾನ್ಯ' ಹಮ್ಮಿಕೊಂಡಿದೆ.

ಈ ಸ್ಥಳೀಯ ವಿಶಿಷ್ಟ ಬಗೆಯ ಬೀಜಗಳನ್ನು ರೈತರ ಬೀಜ ವೈವಿಧ್ಯಗಳು ಎಂದು ಕರೆಯುತ್ತಾರೆ. ಇವು ರೈತರು ಬಹಳ ಕಾಲದಿಂದ ಉಪಯೋಗಿಸುತ್ತಿರುವಂತಹವು. ಪರಿಸರಕ್ಕೆ, ಸಮತೂಕ ಆಹಾರಕ್ಕೆ, ಔಷಧಿಗೆ, ಹುಲ್ಲಿಗೆ, ಇಂಧನಕ್ಕೆ ಹಾಗೂ ಇತರ ಎಲ್ಲಾ ಅವಶ್ಯಕತೆಗಳಿಗೆ ಬೇಕಾಗಿರುವ ಬೀಜಗಳ ಬಗ್ಗೆ ಇವರಿಗೆ ಜ್ಞಾನವಿರುತ್ತದೆ. ಇವು ದೀರ್ಘ ಕಾಲದವರೆಗೂ ಉಳಿಯಬಲ್ಲವು. ಈ ಬೀಜಗಳನ್ನು ಸ್ಥಳೀಯ ಬೀಜಗಳು, ಆರ್ಗ್ಯಾನಿಕ್ ಬೀಜಗಳು, ವಂಶಪಾರಂಪರ್ಯವಾದವು ಎಂದು ಮುಂತಾಗಿ ಕರೆಯುತ್ತಾರೆ.

ವಂದನಾಶಿವರವರ ಪ್ರಕಾರ ಈ ಸ್ಥಳೀಯ ಬೀಜಗಳು ಹೈಬ್ರಿಡ್ ಬೀಜಕ್ಕಿಂತ ಉತ್ತಮವಾದವು. ಇವು ಪರಿಸರಕ್ಕೆ ಅನುಕೂಲಕರ -ವಾಗಿರುತ್ತವೆ. ಇವು ಕೀಟನಾಶಕಗಳ ಗುಣಗಳನ್ನು ಮೈಗೂಡಿಸಿಕೊಂಡಿರುತ್ತವೆ. ಇವು ಉಚಿತವಾದವು, ಇವುಗಳನ್ನು ಪೇಟೆಂಟ್ ಮಾಡಲು ಸಾಧ್ಯವಿಲ್ಲ. 'ನವಧಾನ್ಯ' ಸರ್ಕಾರಕ್ಕೆ ಬೇಡಿಕೆ ಇತ್ತಿದೆ. ಪೇಟೆಂಟ್ ಕೋ ಆಪರೇಷನ್ ಒಪ್ಪಂದವನ್ನು ಭಾರತದಲ್ಲಿ ಜಾರಿಗೆ ತರಬಾರದೆಂಬುದು ಇದರ ಒತ್ತಾಯದ ಬೇಡಿಕೆ. ಈ ಒಪ್ಪಂದದ ಪ್ರಕಾರ ಅಂತರ್‌ರಾಷ್ಟ್ರೀಯ ಪೇಟೆಂಟ್ ಭಾರತಕ್ಕೆ ಕೂಡಾ ಸಂಬಂಧಿಸುತ್ತದೆ. ಆದರೆ ಇದು ಇಲ್ಲಿ ಜಾರಿಗೊಳ್ಳದಿರಲಿ ಎಂಬುದು 'ನವಧಾನ್ಯ' ಸಂಸ್ಥೆಯ ಬೇಡಿಕೆಯಾಗಿದೆ.

ಮಾನಸ 2004, ಡಿಸೆಂಬರ್ ಸಂಚಿಕೆಯಲ್ಲಿನ ಲೇಖನ 'ಮಹಿಳಾ ಚಳವಳಿಯ ಕೆಲವು ಅಘೋಷಿತ ಗುರಿಗಳು'- ಇದನ್ನು ಬರೆದವರು ಡಾ॥ಸುವಿತ್ರಾಬಾಯಿ. ಹೆಸರು ಬಿಟ್ಟು ಹೋದುದಕ್ಕೆ ವಿಷಾದ ವ್ಯಕ್ತಪಡಿಸುತ್ತೇವೆ.

ಸಂಪಾದಕ ಮಂಡಳಿ.

# ಸುರಭಿಯ ಮಹಿಳೆಯರು

- ಮಮತ ಜಿ. ಸಾಗರ್

ಪಿತೃ ಪ್ರಧಾನ ಸಮಾಜದಲ್ಲಿ ಹೆಂಗಸರ ಪರವಾಗಿ ವಾದ ಮಾಡುವುದು ಅನೇಕಬಾರಿ ಅಸಮ್ಮತಿಯ ರೂಪವನ್ನೂ ತೆಗೆದುಕೊಳ್ಳುವುದಿಲ್ಲ. ಪಿತೃಪ್ರಧಾನ ಮೌಲ್ಯದೊಳಗೆ ರಚಿಸಲ್ಪಟ್ಟ ಯಾವುದೇ ರೂಪದ ಕಲೆ ಮಹಿಳೆಯರು ಹಾಗೂ ಮೂಲೆ ಗುಂಪಾದ ಇತರ ಗುಂಪುಗಳು ಯಾವ ರೀತಿ ಚಿತ್ರಿತವಾಗಬೇಕೆಂದು ನಿರ್ದೇಶನವೀಯುತ್ತವೆ. ರಂಗಭೂಮಿ ಇದರಿಂದ ಹೊರತಾಗಿಲ್ಲ. ಇದು ಮನುಷ್ಯನ ಬದುಕಿನ ಹಾಗೂ ಸಾಮಾಜಿಕ ಮೌಲ್ಯಗಳ ಅನೇಕ ಮುಖಗಳನ್ನು ಪ್ರತಿಬಿಂಬಿಸುತ್ತದೆ. ಪಿತೃ ಪ್ರಧಾನ ಮೌಲ್ಯಗಳು ಮರು ಹುಟ್ಟು ಪಡೆಯುವುದಕ್ಕೂ ಕೂಡಾ ಇದೊಂದು ಸ್ತರವಾಗಿದೆ. ಪ್ರಮುಖ ವಿಚಾರಧಾರೆ ಹಾಗೂ ಅದರ ವಿವಿಧ ರೂಪಗಳು ಹೇಗೆ ಪ್ರಚಲಿತದಲ್ಲಿರುತ್ತವೆ ಎಂಬುದನ್ನು ರಂಗಭೂಮಿಯ ವಿಮರ್ಶೆ ಮಾಡುವುದರ ಮೂಲಕ ನಾವು ತಿಳಿಯಬಹುದಾಗಿದೆ. ಹೆಂಗಸರಿಗೆ ಮೀಸಲಾದ ಪಾತ್ರಗಳಲ್ಲಿ ಅವರು ಬದುಕುತ್ತಾರೆ, ಅವರು ನಟಿಸಿದಾಗ ಪಾತ್ರಗಳನ್ನು ಅದ್ಭುತವಾಗಿ ನಟಿಸುತ್ತಾರೆ. ಏಕೆಂದರೆ ಕುಟುಂಬ ಜೀವನ, ನಾಟಕ, ಹಾಗೂ ಸಮಾಜ ಎಲ್ಲವೂ ಒಂದು ಕಡೆ ಮಿಳಿತಗೊಂಡಿರುತ್ತದೆ. ಇದು ಅಸಮ್ಮತಿಯ ಒಂದು ರೂಪ. ಆದರೆ ಇದು ನಾಟಕದ ಭಾಗವಾಗಿಬಿಡುವುದರಿಂದ ಬಹಳಷ್ಟು ಸಮಯ ಗಮನಕ್ಕೆ ಬಾರದೇ ಹೋಗಿಬಿಡುತ್ತದೆ. ಈ ಲೇಖನದಲ್ಲಿ ಸುರಭಿ ಮಹಿಳೆಯರನ್ನು ಈ ಕೆಳಕಂಡ ಸಂಬಂಧದ ಹಿನ್ನೆಲೆಯಲ್ಲಿ ನೋಡಲು ನಾನು ಉದ್ದೇಶಿಸಿದ್ದೇನೆ.

1) ಸುರಭಿ ನಾಟಕ ತಂಡಗಳ ನಾಟಕಗಳ ಮಹಿಳಾ ವಸ್ತು ಮತ್ತು ಪಾತ್ರಗಳು
2) ಈ ವಸ್ತುಗಳಲ್ಲಿ ಹಾಗೂ ಪಾತ್ರಗಳಲ್ಲಿ ಜೀವ ತುಂಬುವ ಸುರಭಿಯ ಮಹಿಳೆಯರು.

ಈ ಹಂತದಲ್ಲಿ ಉತ್ತಮ ನಟಿಯರಾಗಿ ಅಸ್ತಿತ್ವಕ್ಕೆ ಬರಬೇಕೆಂಬ ಈ ಮಹಿಳೆಯರ ತುಡಿತ ಹಾಗೂ ಪಿತೃ ಪ್ರಾಧಾನ್ಯತೆಯೊಳಗೇ ಅವರು 'ಸ್ಪೇಸ್'ಗಾಗಿ ವ್ಯವಹರಿಸುವುದನ್ನು ಗುರುತಿಸುವ ಪ್ರಯತ್ನವನ್ನೂ ಇಲ್ಲಿ ಮಾಡಲಾಗಿದೆ. ಈ ಲೇಖನವನ್ನು ನನ್ನ ಗಮನಿಸುವಿಕೆ, ಭಾಗವಹಿಸುವಿಕೆ ಹಾಗೂ ಸುರಭಿ ವೆಂಕಟೇಶ್ವರ ಮಂಡಳಿಯ ಸದಸ್ಯರ ವೈಯಕ್ತಿಕ ಸಂದರ್ಶನಗಳನ್ನು ಅವಲಂಬಿಸಿ ಬರೆಯಲಾಗಿದೆ.

## ಸುರಭಿಯ ಸಂಕ್ಷಿಪ್ತ ಇತಿಹಾಸ

ಆಂಧ್ರಪ್ರದೇಶದೊಳಗೆ ನೆಲೆಸಿದ ಮಹಾರಾಷ್ಟ್ರದ ಕಡೆಯ ರಾಜನ ಸೈನಿಕ ಪಡೆಯ ಜನರು ಸುರಭಿಯವರ ಮೂಲನಿವಾಸಿಗಳೆಂದು ಗುರುತಿಸಲಾಗಿದೆ. ಇವರಲ್ಲಿ ವನರಸ ಗೋವಿಂದ್‌ರಾವ್ ಎಂಬುವವರು ಜೀವನೋಪಾಯಕ್ಕಾಗಿ ಗೊಂಬೆಯಾಟದಿಂದ ರಂಗಭೂಮಿಯತ್ತ ತಿರುಗಲು ನಿರ್ಧರಿಸಿದರು. ಹೀಗೆ ಸುರಭಿ ಪ್ರಾರಂಭವಾದದ್ದು 1885 ರಲ್ಲಿ ಕುಡ್ಡಫಾ ಜಿಲ್ಲೆಯ ಸಣ್ಣ ಹಳ್ಳಿಯೊಂದರಲ್ಲಿ. ಸ್ಥಳೀಯ ತೆಲುಗು ಆಡುಭಾಷೆಯಲ್ಲಿ ಅವರು ಪಾಂಡಿತ್ಯ ಹೊಂದಿರದಿದ್ದರಿಂದ ಅವರು ಸೆನ್ಸಿಟೀವ್ ತೆಲುಗನ್ನು ಆಯ್ದುಕೊಂಡರು. ಪೌರಾಣಿಕ ನಾಟಕಗಳನ್ನು ಆಡುವುದಕ್ಕೆ ಈ ಭಾಷೆ ಅವರಿಗೆ ಅನುಕೂಲಕರವಾಗಿತ್ತು.

ಪಾರ್ಸಿ ರಂಗಭೂಮಿಯ ಮಾದರಿಯನ್ನು ಹೊಂದಿ ಆಂಧ್ರದಲ್ಲಿ ಅಸ್ತಿತ್ವದಲ್ಲಿ ಇರುವ ರಂಗಭೂಮಿ ತಂಡ ಎಂದರೆ ಸುರಭಿಯೊಂದೇ. ಉತ್ಸಾಹಪೂರ್ಣ ಹಾಗೂ ಡೈನೆಮಿಕ್ ಪಾರ್ಸಿ ರಂಗಭೂಮಿ ಕಂಪನಿಗಳ ಬೆಳವಣಿಗೆ ಭಾರತದ ಹವ್ಯಾಸಿ ರಂಗಭೂಮಿಯಲ್ಲಿ ತಕ್ಷಣದ ಒಂದು ಬದಲಾವಣೆ ತಂದಿತ್ತು. ಭಾರತದ ಹವ್ಯಾಸಿ ರಂಗಭೂಮಿ ಜಾನಪದ ಅಂಶಗಳನ್ನು ಮೈಗೂಡಿಸಿಕೊಂಡಿದ್ದಾಗ್ಯೂ, ಯುರೋಪಿಯನ್ ರಂಗಭೂಮಿಯಿಂದ ಪ್ರಭಾವಕ್ಕೊಳಗಾದ ಫಾರ್ಸಿ ಕಂಪನಿಗಳಿಂದ ಪ್ರಭಾವಿತವಾಗಿ ನಗರಗಳಲ್ಲಿ ಹುಟ್ಟಿದ್ದಾಗಿದ್ದು, ಮೂಲಭೂತವಾಗಿ ವಸಾಹತುಶಾಹಿ ರೂಪದ ರಂಗಭೂಮಿಯಾಗಿದೆ. ಸುತ್ತಲ್ಪಡುವ ಪರಧೆಗಳು, ರಂಗದ ಮೇಲೆ ಬಳಸುವ ರಂಗವಸ್ತುಗಳು, ರಂಗದ ಮೇಲೆ ಬಳಸಲಾಗುವ ತಾಂತ್ರಿಕತೆ, ಉಪಾಯಗಳು, ರಂಗದ ಮುಂದೆ ಇರುವ ಆರ್ಕೇಸ್ಟ್ರಾ, ಎಲ್ಲಕ್ಕಿಂತ ಹೆಚ್ಚಾಗಿ ಪ್ರೊಸೀನಿಯಂ ಮಾದರಿಯ ರಂಗಭೂಮಿ ಎಲ್ಲವೂ ಸಹ ಯುರೋಪಿಯನ್ ರಂಗಭೂಮಿಯ ಪ್ರಭಾವವಾಗಿದ್ದು, ಪಾರ್ಸಿ ಕಂಪನಿಗಳಿಂದ ಭಾರತಕ್ಕೆ ತರಲ್ಪಟ್ಟಿತು. ಭಾರತದ ಹವ್ಯಾಸಿ ರಂಗಭೂಮಿ ಸ್ಥಳೀಯ ಭಾಷೆ, ಸ್ಥಳೀಯ ಉಡುಗೆ-ತೊಡುಗೆ, ಮತ್ತು ಸ್ಥಳೀಯ ಸಂಗೀತವನ್ನು ಬಳಸುತ್ತಿತ್ತು. ಆದರೆ ಮೂಲರಚನೆ ಎರವಲು ಪಡೆದುದಾಗಿತ್ತು. ಪಾರ್ಸಿ ರಂಗಭೂಮಿಯ ಅಲೆ ಜೋರಾಗಿದ್ದ ಆ ಸಂದರ್ಭದಲ್ಲಿ ಬೆಳಕಿಗೆ ಬರುತ್ತಿದ್ದ ಸ್ಥಳೀಯ ಗುಂಪುಗಳ ಮೇಲೆ ಪ್ರಭಾವ ಬೀರಿತ್ತು.

'ಸುರಭಿ' ಆಂಧ್ರಪ್ರದೇಶದಲ್ಲಿ ಇಂದಿಗೂ ಅಸ್ತಿತ್ವದಲ್ಲಿರುವ ಹವ್ಯಾಸಿ ತಂಡ. ಇದಕ್ಕೆ ಹತ್ತು ವರ್ಷಗಳಿಗಿಂತಲೂ ಮಿಗಿಲಾದ ಇತಿಹಾಸವಿದೆ. ಹಾಗೂ ಈ ಅವಧಿಯಲ್ಲಿ ಅನೇಕ ಬದಲಾವಣೆಗೆ ಒಳಗಾಗಿದೆ. ಇವರು 22 ಕ್ಕೂ ಹೆಚ್ಚು ಪೌರಾಣಿಕ ನಾಟಕಗಳನ್ನು ಪ್ರದರ್ಶಿಸುವುದರ ಜೊತೆಗೆ ಕೆಲವಾರು ಸಾಮಾಜಿಕ

ನಾಟಕಗಳನ್ನೂ ಪ್ರದರ್ಶಿಸುತ್ತಾರೆ. 1972ರ ಹೊತ್ತಿಗೆ 'ಸುರಭಿ'ಯಲ್ಲಿ 2000 ಕಲಾವಿದರು ಹಾಗೂ 46 ತಂಡಗಳು ಆಂಧ್ರದಲ್ಲಿ ಇದ್ದವು. 'ಸುರಭಿ' ಸುವರ್ಣಕಾಲ ಕಂಡದ್ದು ವನರಸ ಗೋವಿಂದ್‌ರಾವ್ ಹಾಗೂ ಅವರ ಮಕ್ಕಳ ಕಾಲದಲ್ಲಿ. ಸುರಭಿ ಕುಟುಂಬ ಕ್ರಮೇಣವಾಗಿ ಬೆಳೆದು ಈಗ ಪರಿಪೂರ್ಣ ಸಂಸ್ಥೆಯಾಗಿ 'ಸುರಭಿ ನಾಟ್ಯ ಕಲಾ ಸಂಘ' ವಾಗಿ ಬೆಳೆದಿದೆ. ಈ ಸಂಸ್ಥೆ ನಾಲ್ಕು ರಂಗ ತಂಡಗಳಿಗೆ ಆಶ್ರಯವಿತ್ತಿದೆ. ಶ್ರೀ ವೆಂಕಟೇಶ್ವರ ನಾಟ್ಯ ಮಂಡಳಿ', 'ಶ್ರೀ ಶಾರದಾ ವಿಜಯ ನಾಟ್ಯ ಮಂಡಳಿ', ಶ್ರೀ ವಿನಾಯಕ ನಾಟ್ಯ ಮಂಡಳಿ ಮತ್ತು ಶ್ರೀ ವಿಜಯ ಬಾಸ್ಕರ್ ನಾಟ್ಯ ಮಂಡಳಿ'. ಈ ಲೇಖನದಲ್ಲಿ ಒಡಮೂಡಿದ ಅಭಿಪ್ರಾಯಗಳು ವೆಂಕಟೇಶ್ವರ ನಾಟ್ಯ ಮಂಡಳಿಯನ್ನು ಗಮನದಲ್ಲಿ ಇಟ್ಟುಕೊಂಡು ಬರೆದಿರುವಂತಹವು. 'ಮಾಯಾ ಬಜಾರ್', 'ಶ್ರೀ ವೀರ ಬ್ರಹ್ಮಗಿರಿ ಚರಿತಂ' 'ರಾಮರಾಜ್ಯಂ' 'ಶ್ರೀ ಕೃಷ್ಣ ಲೀಲಾಲು' 'ಲವಕುಶ' 'ಬಾಲನಾಗಮ್ಮ' 'ಕುರುಕ್ಷೇತ್ರಂ'- ಹೀಗೆ ಭಾರತದ ಪೌರಾಣಿಕ ಕಥೆಗಳನ್ನು ಆಧರಿಸಿದ ಕೆಲವು ನಾಟಕಗಳು ಸುರಭಿಯವರದು.

ಸುರಭಿಯ ನಾಟಕಗಳಲ್ಲಿ ಮಹಿಳೆಯರ ಚಿತ್ರಣಗಳನ್ನು ವಿಮರ್ಶಿಸಬೇಕೆಂದರೆ ಸುರಭಿಯ ರಚನೆಯನ್ನು ಒಂದು ಕುಟುಂಬವೆಂದು ಮೊದಲು ನಾವು ವಿವರಿಸುವುದು ಅಗತ್ಯವಾಗುತ್ತದೆ. ವನರಸ ಗೋವಿಂದ ರಾವ್ ಸುಬ್ಬಮ್ಮನವರನ್ನು ಮದುವೆಯಾಗಿದ್ದರು. ಅವರಿಗೆ ಇನ್ನೊಬ್ಬ ಮಹಿಳಾ ಕಲಾವಿದೆಯ ಅಗತ್ಯವಿದ್ದುದರಿಂದ ಆತ ತನ್ನ ಹೆಂಡತಿಯ ಚಿಕ್ಕತಂಗಿ ಲಕ್ಷ್ಮಮ್ಮನನ್ನು ಮದುವೆಯಾದುದಾಗಿ ತಿಳಿದು ಬರುತ್ತದೆ. ವನರಸ ಗೋವಿಂದರಾವ್ ಅವರು ತಮ್ಮ ಹೆಣ್ಣು ಮಕ್ಕಳನ್ನು ಎರೆಡು ಮದುವೆ ಮಾಡಿದಾಗ, ಅವರಿಗೆ ವರದಕ್ಷಿಣೆಯಾಗಿ ಮೇಕಪ್-ಕಿಟ್ಸ್ ಹಾಗೂ ರಂಗಪರಿಕರಗಳನ್ನು ಕೊಡುತ್ತಿದ್ದುದಾಗಿ ತಿಳಿದು ಬರುತ್ತದೆ. ಆ ದಿನಗಳಲ್ಲಿ ನಟಿಸುವುದಕ್ಕೆ ಮಹಿಳೆಯರು ಮುಂದೆ ಬರೆದಿದ್ದಾಗ, ನಟಿಯರು ಕಂಪನಿಯ ಸ್ವತ್ತಾಗಿದ್ದರು. 'ಸುರಭಿ' ಯಲ್ಲಿನ ಮಹಿಳೆಯರನ್ನು ಮದುವೆಯ ತದನಂತರದಲ್ಲಿ ಅವರ ಅತ್ತೆ-ಮಾವಂದಿರ ಮನೆಗೆ ಕಳಿಸಿದ್ದೇ ಇಲ್ಲ. ಬದಲಾಗಿ, ವರನನ್ನು ಸುರಭಿಯ ಕುಟುಂಬದ ಸದಸ್ಯನೆಂದು ಒಪ್ಪಿಕೊಳ್ಳಲಾಗುತ್ತಿತ್ತು. ತಮ್ಮ ಸೊಸೆಯನ್ನು ನಟಿಯೆಂದು ಒಪ್ಪಿಕೊಳ್ಳುವ, ಆಕೆ ನಟನೆಯ ವೃತ್ತಿಯನ್ನು ಮುಂದುವರಿಸಲು ಅವಕಾಶ ನೀಡುವ ಕುಟುಂಬಗಳನ್ನು ಕಾಣುವುದೇ ಕಷ್ಟ. ಆದರೆ ಈ ಮಹಿಳೆಯರು ಕುಟುಂಬದಲ್ಲಿ ಸದಸ್ಯರಾದ್ದರಿಂದ ಬೇರೆಯವರು ಎದುರಿಸಬಹುದಾದ ಯಾವುದೇ ಸಾಮಾಜಿಕ ಒತ್ತಡಗಳನ್ನು ತಡೆದಿರಬಹುದು. ಕಲಾವಿದೆಯರ ಸ್ಥಾನ ಮಾನಗಳನ್ನು ಸಹ ಇದು ಬಿಂಬಿಸುತ್ತದೆ. ಈ ಪದ್ಧತಿಯಿಂದ ಕಂಪನಿಯ ಬೆಳವಣಿಗೆಗೆ ಸಹಾಯವಾದುದಲ್ಲದೇ ಕಂಪನಿಯ ನಟಿಯರು ಅಲ್ಲಿಯೇ ಉಳಿಯುವಂತಾಯಿತು. ಈ ದಿನದವರೆಗೆ 'ಸುರಭಿ' ಯ ಮಹಿಳೆಯರು ಸುರಭಿಯ ಅವಿಭಾಜ್ಯ ಅಂಗವಾಗಿಯೇ ಉಳಿದಿದ್ದಾರೆ. 'ಸುರಭಿ' ತಂಡ ಮುಂದುವರೆದು ಬಂದಿರುವುದು ಅಲ್ಲಿನ ಮಹಿಳೆಯರಿಂದಾಗಿ. ಅವರು ತಂಡದೊಳಗೆ ಸೇರಿರುವವರು ಅಥವಾ ಮದುವೆಯ ಮೂಲಕ ತಂಡದೊಳಗೆ ಬಂದಿರುವವರು.

ಸುರಭಿಯ ಮಹಿಳೆಯರು ಅತ್ಯಂತ ಪ್ರತಿಭಾವಂತರು. ಉತ್ತಮ ನಟಿಯಾಗಿರುವ ವೆಂಕೂಬಾಯಿಯ ವಿಚಾರದಲ್ಲಿ ಇದು ಬಿಂಬಿತವಾಗಿದೆ. 1908 ರಲ್ಲಿ ಗರ್ಭಿಣಿ ಸ್ತ್ರೀಯೋರ್ವಳ ಪಾತ್ರವನ್ನು ಮಾಡುತ್ತಿದ್ದಾಗ, ಈಕೆ ಕಮಲಾಬಾಯಿಗೆ ಜನ್ಮವಿತ್ತಳು. ಸುರಭಿಯ ಕಮಲಾಬಾಯಿ ಸುಂದರಳಲ್ಲದೇ ನಟಿಯಾಗಿ ಹೆಸರು ಮಾಡಿದವರು. ಆಕೆ ಸಿನೆಮಾಗಳಲ್ಲಿ ಕೂಡಾ ನಟಿಸಿದ್ದಾರೆ. ತೆಲುಗಿನ ಮೊದಲ ಮೂಕ ಚಿತ್ರ ಭಕ್ತ ಪ್ರಹ್ಲಾದದಲ್ಲಿ ಈಕೆ ನಾಯಕಿ ನಟಿ 'ಲೀಲಾವತಿ' ಯಾಗಿ ನಟಿಸಿದ್ದಾರೆ. ಆಕೆ ಹಾರ್ಮೋನಿಯಂ, ಸಾರಂಗಿ, ಹಾಗೂ ವಯಲಿನ್ ಬಾರಿಸುತ್ತಿದ್ದರು. ಈಕೆ ಡ್ಯಾನ್ಸ್ ಕಲಾವಿದೆಯಾಗಿದ್ದುದಲ್ಲದೇ ಹಿಂದೂಸ್ಥಾನಿ ಸಂಗೀತ ಕಲಿತಿದ್ದರು. ಆಕೆಯ ನಂತರ ಹಲವಾರು ಮಹಿಳೆಯರು ಸುರಭಿಗೆ ಬಂದಿದ್ದಾರೆ, ಹಾಗೆಯೇ ಆಕೆಯಷ್ಟೇ ಪ್ರತಿಭಾವಂತರೂ ಕೂಡಾ. ಪದ್ಮಲತ, ಪದ್ಮಜ, ಶಶಿರೇಖ ಮತ್ತು ಸೆರ್‌ವಾನಿ ಈಗಿನ ತಲೆಮಾರಿನ ವಯಸ್ಸಾದ ಮಹಿಳೆಯರು. ಸ್ವಪ್ನ, ನಿರುಪಮ, ಹಾಗೂ ಇತರ ಯುವತಿಯರು ಈಗ ಮುಖ್ಯ ಪಾತ್ರ ವಹಿಸುತ್ತಾರೆ.

ಸುರಭಿಯ ಮಹಿಳೆಯರಿಗೆ ರಂಗದ ಪಾತ್ರ ರಂಗದ ಹೊರಗಿನ ಪಾತ್ರಕ್ಕಿಂತ ಹೆಚ್ಚು ಭಿನ್ನವಾಗಿಲ್ಲ. ಅರಮನೆ, ಸಿಂಹಾಸನ, ಕಿರೀಟಗಳು, ಒಡವೆಗಳು, ಉಡುಗೆ-ತೊಡುಗೆಗಳು, ಬಣ್ಣ, ಬೆಳಕು, ಸಂಗೀತ ಎಲ್ಲವೂ ಅವರ ಬದುಕಿನ ಭಾಗ ಕೂಡಾ ಆಗಿವೆ. ಅವರು ಸೃಷ್ಟಿಸಿದ ವೈಭವಗಳ ಮಧ್ಯದಲ್ಲಿಯೇ ಬದುಕುವ ಅವರ ಬದುಕು ಇತರೇ ಮಹಿಳೆಯರಿಗಿಂತ ಭಿನ್ನವೇನೂ ಅಲ್ಲ. ಅದು ಸಾಮಾಜಿಕ ನಾಟಕವಾಗಿರಬಹುದು, ಅಥವಾ ಪೌರಾಣಿಕ ಕಥೆಯಾಗಿರಬಹುದು, ಅವರ ನಟನೆ ಪಿತೃಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ಹೊರಿಸಲಾದ ಪಾತ್ರಗಳದ್ದೇ ಆಗಿದೆ. ಹೆಂಗಸರಿಗೆಂದೆ ಹೇಳಲಾದ ಕರ್ತವ್ಯಗಳನ್ನು ಅವರು ಪ್ರಬುದ್ಧವಾಗಿಯೇ ಪ್ರದರ್ಶಿಸುತ್ತಾರೆ. ವಿಧೇಯ ಹೆಂಡತಿಯರು, ಕಾಳಜಿಯುಳ್ಳ ತಾಯಂದಿರು, ಹರಟೆಯ ಹೆಂಗಸರು, ಒಳ್ಳೆಯ

ಹಾಗೂ ಕೆಟ್ಟ ಮಹಿಳೆಯರ ಪಾತ್ರಗಳನ್ನು ಅವರು ರಂಗದ ಮೇಲೆ ನಟಿಸುತ್ತಾರೆ. ಹಾಗೆಯೇ ಹೆಂಗಸರಿಗೇ ಅಂಟಿಸಲಾದ ಗುಣಗಳನ್ನು ಅವರು ಚನ್ನಾಗಿ ಪ್ರದರ್ಶಿಸುತ್ತಾರೆ - ಚಲ್ಲು ಹುಡುಗಿಯರು, ಅಸಹಾಯಕ ಮಹಿಳೆಯರು, ಯಾವಾಗಲೂ ಸುಂದರಿಯಾಗಿರುವ ಹೆಂಗಸು, ಅಸೂಯೆ, ದಯಾಪರತೆ, ಕೆಟ್ಟ ಹೆಂಗಸು ಹೀಗೆ. ನಿತ್ಯ ಜೀವನದಿಂದ ಹೊರ ಬಂದು ದೊಡ್ಡ ಪಾತ್ರ ಮಾಡುವ ಇವರು ವಾಸ್ತವದ ಜೊತೆ ವ್ಯವಹರಿಸುತ್ತಿರುತ್ತಾರೆ. ಸುರಭಿ ತಂಡದ ಉತ್ತಮ ನಟಿಯರೆಂದು ಸಾಬೀತು ಪಡೆಸಲು ಇವರು ತಮಗಿರುವ ಅವಕಾಶದಲ್ಲಿಯೇ ಪುರುಷ ಪಾತ್ರಗಳ ಹಾಗೂ ಮುಖ್ಯ ಪಾತ್ರಗಳ ಜೊತೆ ಒಂದು ಅಸ್ತಿತ್ವ ಸ್ಥಾಪಿಸಿಕೊಳ್ಳುತ್ತಾರೆ. ಕಾಲ್ಪನಿಕ ಹಾಗೂ ವಾಸ್ತವ ಪ್ರಪಂಚಗಳ ನಡುವೆ ಅವರು ಕಾಲ್ಪನಿಕ ಪ್ರಪಂಚದ ಉತ್ತಮ ಬದುಕನ್ನು ಆರಿಸಿಕೊಳ್ಳಲು ಅವರು ಇಚ್ಛಿಸುತ್ತಾರೆ.

ರಂಗಭೂಮಿಯ ಕಲೆಯೇ ಒಂದು ಫ್ಯಾಂಟಸಿ. ಸುರಭಿಯ ಹೆಂಗಸರಿಗೆ ಕಲ್ಪನೆ ಹಾಗೂ ವಾಸ್ತವ ಒಂದು ಸ್ತರದಲ್ಲಿ ಒಂದು ಗೂಡುತ್ತದೆ. ರಂಗದ ಮೇಲೆ ಅಭಿನಯಿಸುವ ಮಹಿಳೆಯರು - ಅದೇ ಸಂದರ್ಭದಲ್ಲಿ ಮನೆಯನ್ನು ನಿರ್ವಹಣೆ ಮಾಡುತ್ತಾ ಎರೆಡೂ ಪಾತ್ರಗಳನ್ನೂ ಒಟ್ಟಿಗೆ ನಿರ್ವಹಿಸುತ್ತಿರುತ್ತಾರೆ. ರಂಗದ ಹಿಂದೆ ಅವರು ತರಕಾರಿ ಕತ್ತರಿಸುವುದು, ಅಡಿಗೆ ಮಾಡುವುದು, ಉಜ್ಜುವುದು, ಕಾಮನ್ ಅಡಿಗೆ ಮನೆಯಲ್ಲಿ ಅಡಿಗೆ ತಯಾರಿಸುತ್ತಲೇ ಅವರು ತಮ್ಮ ಸರದಿ ಬಂದಾಗ ರಂಗದ ಮೇಲೆ ತಮ್ಮ ಸಂಭಾಷಣೆ ಹೇಳುತ್ತಾ ಪಾತ್ರಗಳನ್ನು ಅಭಿನಯಿಸುತ್ತಿರುತ್ತಾರೆ. ನಟಿಯರಾಗಿರುವ ಅವರ ವ್ಯಕ್ತಿತ್ವದಿಂದಾಗ ನಿತ್ಯದ ಯಾಂತ್ರಿಕ ಜೀವನದಿಂದ ಅವರಿಗೆ ಯಾವುದೇ ಬಿಡುಗಡೆ ಸಿಗುವುದಿಲ್ಲ. ಅವರಿಗೆ ವೈಯಕ್ತಿಕ ಹಾಗೂ ಸಾರ್ವಜನಿಕ ಸ್ಪೇಸ್‌ಗಳು ಒಂದಕ್ಕೊಂದು ಹೆಣೆದುಕೊಂಡಿರುತ್ತವೆ. ಸುರಭಿ ರಂಗಭೂಮಿ, ಸುರಭಿ, ಕುಟುಂಬ, ಸಾಮಾಜಿಕ ಸ್ತರದಲ್ಲಿ ಸುರಭಿ ಒಂದಕ್ಕೊಂದು ಹೆಣೆದು ಕೊಂಡಿರುವುದರಿಂದ, ಈ ಮಹಿಳೆಯರ ಅಸ್ತಿತ್ವ ರಂಗದ ಮೇಲಾಗಲೀ, ಕುಟುಂಬದಲ್ಲಾಗಲೀ ಅಥವಾ ಸಾಮಾಜಿಕ ವಲಯದಲ್ಲಾಗಲೀ ಪ್ರತ್ಯೇಕಿಸಲಾಗುವುದಿಲ್ಲ.

ಇವರು ಯಾವಾಗಲೂ ಮೇಕ್-ಶಿಫ್ಟ್ ಕ್ಯಾಂಪ್‌ಗಳಲ್ಲಿಯೇ ಭಾಗಿಯಾಗುವುದರಿಂದ ರಂಗದ ಹಿಂದೆ ಕಟ್ಟಲ್ಪಟ್ಟ ತಾತ್ಕಾಲಿಕ ಟೆಂಟ್‌ಗಳಲ್ಲಿ ಇವರು ವಾಸಿಸುತ್ತಾರೆ. ಈ ಭಾವಣೆಯ ಕಂಪಾರ್ಟಮೆಂಟ್‌ಗಳಲ್ಲಿ 60 ರಷ್ಟು ಜನ ಇರುತ್ತಾರೆ. ಸ್ವಲ್ಪ ವಿಶಾಲವಾಗಿರುವ ಜಾಗ ಕಾಮನ್ ಅಡಿಗೆ ಮನೆಯಾಗಿರುತ್ತದೆ. ಹಿಂದೆ ಈ ಸಾಮಾನ್ಯ ಅಡಿಗೆ ಮನೆ ಕೂಡಿರುವ ಕುಟುಂಬದಲ್ಲಿ ಅಲ್ಲಿ ಬದುಕುವ ಹಾಗೂ ಕೆಲಸ ಮಾಡುವ ಎಲ್ಲರಿಗೂ ಸಾಮಾನ್ಯವಾಗಿರುತ್ತಿತ್ತು. ಆದರೆ ಈಗ ಪ್ರದರ್ಶನಗಳ ಸಂದರ್ಭದಲ್ಲಿ ಮಾತ್ರ ಸಾಮಾನ್ಯ ಅಡಿಗೆ ಮನೆ ಬಳಸಲಾಗುತ್ತದೆ. ಇಲ್ಲವಾದರೆ, ಪ್ರತಿ ಕುಟುಂಬ ತಮ್ಮ ತಮ್ಮ ಪುಟ್ಟ ಪುಟ್ಟ ಕೊಠಡಿಗಳಲ್ಲಿಯೇ ಸಣ್ಣ, ಸಣ್ಣ ಅಡಿಗೆ ಮನೆ ಹೊಂದಿರುತ್ತವೆ. 'ಸುರಭಿ' ಅನೇಕ ಮುಖ್ಯ ಪರಿವರ್ತನೆಗಳತ್ತ ತೇಲುತ್ತಿರುವಾಗ ಬಹಳ ಬದಲಾವಣೆಗಳು ನಡೆಯುತ್ತಿವೆ. ಮೊದಲು 'ಸುರಭಿ' ಯ ಖರ್ಚು-ವೆಚ್ಚ ನಾಟಕದಿಂದ ಸಂಗ್ರಹವಾಗುತ್ತಿದ್ದ ಹಣ-ಕಾಸಿನ ಮೇಲೆ ಪೂರ್ತಿಯಾಗಿ ಅವಲಂಬಿತವಾಗಿತ್ತು. ಹಣ ಕೂಡಾ ಚೆನ್ನಾಗಿ ಸಂಗ್ರಹವಾಗುತ್ತಿತ್ತು. ನಂತರ ಅದನ್ನು ಸರಿಸಮನಾಗಿ ಹಂಚಿಕೆ ಮಾಡಿಕೊಳ್ಳಲಾಗುತ್ತಿತ್ತು. ಈಗ ತಂಡದ ಸದಸ್ಯರಿಗೆ ಸ್ಟೈಪೆಂಡ್ ಬರುತ್ತದೆ ಜೊತೆಗೆ ನಾಟಕದಿಂದ ಸಂಗ್ರಹವಾಗುವ ಹಣ ಒಂದೇ ತೆರನಾಗಿರುವುದಿಲ್ಲ. ಇದರ ಜೊತೆಗೆ ವ್ಯಕ್ತಿಯ ಅಗತ್ಯಗಳೂ ಬದಲಾಗಿವೆ. ಹೊರಗಿನ ಒತ್ತಡಗಳು, ಅವಕಾಶಗಳು, ಖಾಸಗಿ ಹಾಗೂ ಸಾರ್ವಜನಿಕ ಎಂಬುದರ ಬಗೆಗಿನ ಅರ್ಥ ಸುರಭಿಯ ಸಂದರ್ಭದಲ್ಲಿ ಇಂದು ಬದಲಾವಣೆಯಾಗಿವೆ. ಪ್ರತಿನಿತ್ಯದ ರಿಹರ್ಸಲ್ ಕುಟುಂಬದೊಳಗಿನ ಸ್ಥಾನಮಾನಗಳಾಗಿ ಇಂದು ಉಳಿದಿಲ್ಲ. ಸದಸ್ಯರು ಖಾಸಗಿಯಾಗಿ ಇನ್ನಷ್ಟು 'ಸ್ಪೇಸ್' ಇರಬೇಕೆಂದು ಭಾವಿಸುತ್ತಾರೆ. ನಟಿಸುವುದರ ಜೊತೆಗೇ, ವಿದ್ಯಾವಂತ ಯುವಕರು ಇತರೇ ಕೆಲಸಗಳನ್ನು ಅರುಸುತ್ತಾರೆ. ಇದರಿಂದಾಗಿ ಕೂಡಿರುವ ಕುಟುಂಬದಲ್ಲಿ ಆರ್ಥಿಕ ಸ್ಥಾನ-ಮಾನಗಳೂ ಬದಲಾವಣೆಯಾಗಿವೆ. ಈ ಎಲ್ಲಾ ಅಂಶಗಳೂ ಕೂಡಿರುವ ಕುಟುಂಬದಲ್ಲಿಯೇ ನೂಕ್ಲಿಯರ್ ಕುಟುಂಬ ಸ್ಥಾಪಿಸುವ ಯತ್ನಗಳನ್ನು ಸುಚಿಸುತ್ತವೆ. 'ಸುರಭಿ' ಯ ಮಹಿಳೆಯರಲ್ಲಿ ಈ ಬದಲಾವಣೆಗಳು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಏಕೆಂದರೆ ಸಾರ್ವಜನಿಕ, ಖಾಸಗಿ ಹಾಗೂ ಕುಟುಂಬದ ವಲಯದ ಅರ್ಥೈಸುವಿಕೆಯ ಅವರ ಗ್ರಹಿಕೆಗಳು ವಿಸ್ತಾರಗೊಂಡಿವೆ.

ಮೇಕ್-ಶಿಫ್ಟ್ ರೀತಿಯ ಕಾರ್ಯ ನಿರ್ವಹಣೆಯಿಂದಾಗಿ ಸುರಭಿಯ ಮಕ್ಕಳಿಗೆ ಒಂದು ಶಾಲೆ ಅಥವಾ ಒಂದೇ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರಿಸುವುದು ಸಾಧ್ಯವಾಗದು. ಆವರು ಆಗಾಗ್ಗೆ ಒಂದು ಸಂಸ್ಥೆಯಿಂದ ಮತ್ತೊಂದು ಸಂಸ್ಥೆಗೆ ಬದಲಾವಣೆ ಮಾಡಿಸುತ್ತಿರುತ್ತಾರೆ. ಹೊಸ ಜಾಗಗಳಲ್ಲಿ ಅವರ ಹೊಸ ಗೆಳೆಯ/ಗೆಳತಿಯರು ಅವರನ್ನು ಹೇಗೆ ಸ್ವೀಕರಿಸುತ್ತಾರೆ ಎಂದು ಚಿಕ್ಕ ಹುಡುಗಿಯರನ್ನು ನಾನು ಕೇಳಿದಾಗ, ಹುಡುಗಿಯರ ಜೊತೆ ಸಮಸ್ಯೆ ಇಲ್ಲವೆನ್ನುತ್ತಾರೆ. ಅವರಿಂದ ದೂರವಿರುವ ಯಾರನ್ನೂ ಅವರು ಭೇಟಿಯಾಗುವುದು

ಅಪರೂಪ. ಏಕೆಂದರೆ ಅವರು ಕಲಾವಿದರ ಕುಟುಂಬದವರು ಹಾಗೂ ಅಭಿನಯಿಸುವವರು. ಆದರೆ ಅವರಿಗೆ ಹುಡುಗರ ಜೊತೆ ಸಮಸ್ಯೆಗಳಿವೆ. ಹುಡುಗರು ಅವರತ್ತ ವಿಚಿತ್ರವಾಗಿ ನೋಡುತ್ತಾರೆ. ಅವರನ್ನು ಇತರ ಹುಡುಗಿಯರಂತೆ ನಡೆಸಿಕೊಳ್ಳುವುದಿಲ್ಲ. ಸಾಯಂಕಾಲಗಳಲ್ಲಿ ಅವರು ಅಭಿನಯಿಸುವ ಪಾತ್ರಗಳ ಸಂಭಾಷಣೆಯಿಂದ ಅವರನ್ನು ಹಂಗಿಸುತ್ತಾರೆ. ಬೀದಿಗಳಲ್ಲಿ ಅವರು ಅಭಿನಯಿಸಿದ ಪಾತ್ರಗಳಿಂದ ಅವರನ್ನು ಹೆಸರಿಡಿದು ಕರೆಯುತ್ತಾರೆ. ಅವರು ನಾಟಕ ನೋಡಲು ಬಂದರೆ ತಾವು ಕುಳಿತ ಸ್ಥಳಗಳಿಂದ ಅವರ ನಿಜವಾದ ಹೆಸರು ಕೂಗಿ ಪ್ರದರ್ಶನಗಳಿಗೆ ಅಡ್ಡಿ ಮಾಡುತ್ತಾರೆ. ಇಂತಹ ಸಂಗತಿಗಳು ಸ್ವಲ್ಪ ಕಾಲದವರೆಗೆ ನಡೆಯುತ್ತಿರುತ್ತವೆ. ಹಾಗಾಗಿ ಹುಡುಗಿಯರಿಗೆ ಮುಜುಗರವಾಗುತ್ತದೆ. ಈ ಹುಡುಗಿಯರನ್ನು ಅವರು ಮಾಡುವ ಪಾತ್ರಗಳಿಂದ ಗುರುತಿಸಲಾಗುತ್ತದೆ ಮತ್ತು ಅವರನ್ನು ರ್‍ಯಾಗಿಂಗ್ ಮಾಡಿ ಅವಹೇಳನ ಮಾಡಲಾಗುತ್ತದೆ. ಅದು ರಾಜಕುಮಾರಿ ಪಾತ್ರವಾಗಿರಬಹುದು, ಮಂತ್ರವಾದಿನಿಯಾಗಿರಬಹುದು, ಮಗಳಾಗಿರಬಹುದು, ರಾಜನ ಆಸ್ಥಾನದಲ್ಲಿ ನರ್ತಕಿಯಾಗಿರಬಹುದು. ಇದೆಲ್ಲವನ್ನು ಗಮನಿಸಿ ಸಾರ್ವಜನಿಕವಾಗಿ ಟೀಕೆ ಮಾಡಲಾಗುತ್ತದೆ. ಸ್ವಲ್ಪ ಸಮಯದ ನಂತರ ಇನ್ನೇನು ಎಲ್ಲಾ ಸರಿ ಹೋಗಿ ನೆಲೆ ನಿಲ್ಲುವಂತಾಗುವಷ್ಟರಲ್ಲಿ ಅವರು ಬೇರೊಂದು ಸ್ಥಳಕ್ಕೆ ಹೋಗಬೇಕಾಗುತ್ತದೆ. ಮತ್ತೆ ಅಲ್ಲಿ ಕೂಡ ಇದೇ ರೀತಿಯ ವರ್ತನೆಗಳನ್ನು ಎದುರಿಸಬೇಕಾಗುತ್ತವೆ. ಈ ಕಲಾ ವಿದೆಯರನ್ನು ನಾವು ಯಾವ ರೀತಿ ಗ್ರಹಿಸಲಾಗುತ್ತದೋ ಹಾಗೆ ಮನೋರಂಜನೆಯ ವಸ್ತುವಾಗಿ ಕಾಣಲಾಗುತ್ತದೆ. ಒಂದು ಸಾಮಾಜಿಕ ಸಂದರ್ಭದಲ್ಲಿ ಅಭಿನಯಿಸುವ ಕಲಾವಿದೆಯರ ಪಾಡನ್ನು ಇದು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತದೆ. ಸುರಭಿಯ ಸಣ್ಣ ಸಣ್ಣ ಹುಡುಗಿಯರು ಈ ರೀತಿಯ ಕಿರುಕುಳಗಳಿಗೆ ಒಳಗಾಗುತ್ತಿರಬಹುದು.

ಇಲ್ಲಿಯವರೆಗೆ ನಾಟಕದ ಸ್ಕ್ರಿಪ್ಟ್ ಓದುವುದಾಗಲೀ ಅಥವಾ ರಿಹರ್ಸಲ್ ಮಾಡುವುದಕ್ಕಾಗಲೀ ಅವರು ಯಾವುದೇ ಒಂದು ವಿಧಾನವನ್ನೂ ಬಳಸಿಕೊಂಡಿರಲಿಲ್ಲ. ಯಾಕೆಂದರೆ ಭಾಗವಹಿಸುವ ಬಹಳಷ್ಟು ಸದಸ್ಯರಿಗೆ ವಿದ್ಯಾಭ್ಯಾಸವಿರಲಿಲ್ಲ. ಮಹಿಳೆಯರು ತಮ್ಮ ಮನೆಗೆಲಸದೊಟ್ಟಿಗೇ ರಿಹರ್ಸಲ್ ಮಾಡುತ್ತಿದ್ದರು. ಆದರೆ ಈಗ ಸ್ವಲ್ಪ ಮಟ್ಟಿಗೆ ಬದಲಾವಣೆಯಾಗಿದೆ.. ಈಗಿನ ಪೀಳಿಗೆಯ ಸದಸ್ಯರು ಶಾಲೆಗಳಿಗೆ ಹೋಗುತ್ತಿದ್ದಾರೆ, ಹಾಗೂ ವಿದ್ಯಾವಂತರಾಗುತ್ತಿದ್ದಾರೆ. ಸರ್ಕಾರವು ಇವರ ಮಕ್ಕಳಿಗೆ ಉಚಿತ ಶಿಕ್ಷಣದ ಸೌಲಭ್ಯ ನೀಡಿದೆ ಮತ್ತು ಹಸಿರು ಕಾರ್ಡ್‌ನಿಂದಾಗಿ ರಾಜ್ಯದೆಲ್ಲೆಡೆ ಇವರಿಗೆ ಕೆಲವು ಸೌಲಭ್ಯ ದೊರಕಿದೆ. ಹುಡುಗಿಯರು ಶಾಲೆ, ಕಾಲೇಜುಗಳಿಗೆ ಹೋಗುತ್ತಾರೆ. ಅವರು ಕಲೆಯ ಹೊಸ, ಹೊಸ ರೂಪಗಳಿಗೆ ತೆರೆದುಕೊಳ್ಳುತ್ತಿದ್ದಾರೆ. ಹಾಗೂ ನಾಟಕದ ಶಿಸ್ತಿನ ವಿಧಾನಗಳನ್ನು ಬಳಸಿಕೊಂಡು ತಮ್ಮ ಅಭಿನಯವನ್ನು ಹೆಚ್ಚು ಅಭಿವೃದ್ಧಿಗೊಳಿಸಿಕೊಂಡಿದ್ದಾರೆ.

1996 ರಿಂದ 1998ರಲ್ಲಿ ರಾಷ್ಟ್ರೀಯ ನಾಟಕ ಶಾಲೆ ಹಾಗೂ ದೆಹಲಿಯಲ್ಲಿರುವ 'ಅಲ್ಲಾರಿಪು' ಸ್ವಯಂ ಸೇವಕ ಸಂಸ್ಥೆ ಸುರಭಿಯ ಮೂರು ನಾಟಕಗಳೊಂದಿಗೆ ಕೆಲವು ಕಾರ್ಯಾಗಾರಗಳ ಮಾಲೆಯನ್ನು ನಿಯೋಜಿಸಿತು. ಮೂರು ನಾಟಕಗಳೂ ಕಣ್ಮರೆಯಾದ ರಂಗಭೂಮಿಯ ಶ್ರೇಷ್ಠ ನಿರ್ದೇಶಕ ಬಿ.ವಿ. ಕಾರಂತರಿಂದ ನಿರ್ದೇಶಿಸಲ್ಪಟ್ಟಿತ್ತು. ಈ ಸಂದರ್ಭದಲ್ಲಿ ಈ ತಂಡ ಹೊಸ ವಸ್ತು, ಹೊಸ ರಂಗ ವಿನ್ಯಾಸಗಳ ವಿಧಾನಗಳಿಗೆ ತೆರೆದುಕೊಳ್ಳಬೇಕೇ ಎಂಬುದರ ಬಗ್ಗೆ ಅನೇಕ ವಾದಗಳು ಮೂಡಿ ಬಂದವು. ವಾದ-ವಿವಾದಗಳೇನೇ ಇರಲಿ, ಸುರಭಿಯ ಮಹಿಳೆಯರು ಮತ್ತು ಹುಡುಗಿಯರು ಹೊಸ ನಾಟಕ, ಹೊಸ ಅಭಿವ್ಯಕ್ತಿಯ ವಿಧಾನಗಳು ಮುಖ್ಯವೆಂದು ಭಾವಿಸುತ್ತಾರೆ. ಏಕೆಂದರೆ, ಕಾರ್ಯಾಗಾರದಲ್ಲಿ ನಡೆದ ಚರ್ಚೆಗಳು ಈಗಿನ ರಂಗಭೂಮಿಯಲ್ಲಿ ಏನು ನಡೆಯುತ್ತವೆ ಎಂಬುದನ್ನು ಅವರಿಗೆ ಪರಿಚಯಿಸಿದ್ದವು. ನಟಿಯಾಗಿ ಅಸ್ತಿತ್ವಕ್ಕೆ ಬರಬೇಕೆಂಬ ಅವರ ತವಕ ಹಾಗೂ ಪಿತೃ ಪ್ರಾಧಾನ್ಯತೆಯೊಳಗೇ ವ್ಯವಹರಿಸುವ 'ಸ್ಪೇಸ್' ನಿಂದಾಗಿ ಅವರು ಈ ರೀತಿ ಆಲೋಚನೆ ಮಾಡಿರಬಹುದು. ವರ್ಷಗಳಿಂದ 'ಸುರಭಿ' ಮಾಡುತ್ತಿರುವ ನಾಟಕಗಳು ಪುರುಷ ಪ್ರಾಧಾನ್ಯತೆ ಹೊಂದಿದ ವಸ್ತುಗಳು, ಪುರುಷ ಪಾತ್ರಗಳು ಕೇಂದ್ರೀಕೃತವಾದುಗಳು, ಮುಖ್ಯವಾಗಿ ಪುರುಷ ಪಾತ್ರಗಳನ್ನೇ ಚಿತ್ರಿಸುವಂತಹವುಗಳು. ಮಹಿಳಾ ಪಾತ್ರಗಳು ಯಾವಾಗಲೂ ಪೂರಕವಾದ ಪಾತ್ರಗಳೇ ಆಗಿರುತ್ತಿದ್ದವು. ರಾಜನ ರಾಣಿಯರು, ರಾಜನ ರಾಣಿಯ ದಾಸಿಯರು, ರಾಮು/ಕೃಷ್ಣ/ಲವ-ಕುಶರ ತಾಯಂದಿರು. ತಂಗಿಯರು ಅಥವಾ ಯಾವುದೋ ಹೆಂಗಸು. ಈ ಪಾತ್ರಗಳು ಪ್ರಧಾನವಾದ ಪುರುಷ ಪಾತ್ರಗಳಿಗೆ ಕುಶನ್‌ಗಳಾಗಿರುತ್ತಿದ್ದವು. 1997 ಹಾಗೂ 1998 ರಲ್ಲಿ ಸುರಭಿ 'ಚಾಂದಿ ಪ್ರಿಯ' ಮತ್ತು 'ಬಸ್ತಿ ದೇವತಾ ಯಾದಮ್ಮ' (ಬಲ್ಟೋಲ್ಟ್ ಬ್ರೆಕ್ಟ್‌ನ 'ದಿ ಗುಡ್ ವುಮನ್ ಆಫ್ ಜಕ್‌ವಾನ್ ಆಧಾರಿತ ನಾಟಕ) ನಾಟಕಗಳನ್ನು ಆಡಿದಾಗ ಈಗಿನ ಜನಾಂಗದ ಸುರಭಿ ಹೆಂಗಸರು ಮೊದಲಬಾರಿಗೆ ಮಹಿಳಾ ಕೇಂದ್ರೀಕೃತ ನಾಟಕದಲ್ಲಿ ನಟಿಸಿದ್ದರು, ಮತ್ತು ಮಹಿಳೆಯರೇ ಮುಖ್ಯ ಪಾತ್ರಗಳಲ್ಲಿದ್ದರು.

ಚಲನಶೀಲವಾಗಿರುವ ವಾಸ್ತವದಲ್ಲಿ ಯಾವುದೇ ರಂಗಭೂಮಿ ನಿಂತನೀರಾಗಿ ಉಳಿಯಲು ಸಾಧ್ಯವಿಲ್ಲ. ರಂಗಭೂಮಿ ವಿಭಿನ್ನ ಸಾಮಾಜಿಕ ಸಾಂಸ್ಕೃತಿಕ ಸಂದರ್ಭಗಳಲ್ಲಿ ಅದರ ವಸ್ತು, ಮಾಡುವ ವಿಧಾನಗಳಲ್ಲಿ ನಿರಂತರವಾಗಿ ಬದಲಾವಣೆಯಾಗುತ್ತಿದೆ. ಆದ್ದರಿಂದ, ಯಾವುದೇ ಬದಲಾವಣೆ ಇರದ 'ವಿಶೇಷ ಸುರಭಿ ಪ್ರದರ್ಶನ' ವೆಂದು ಯಾವುದೂ ಇರಲಾರದು. ಆದ್ದರಿಂದ ಸುರಭಿ ಅದರ ಕೊಡುಗೆಯಲ್ಲಿ ನಿಂತ ನೀರು ಆಗಿದೆ ಎಂದೂ ಕೂಡಾ ಹೇಳಲಾಗದು. ಬದಲಾಗಿ, ಬದಲಾವಣೆಗಳಿಗೆ 'ಸುರಭಿ' ಯಾವಾಗಲೂ ಸ್ಪಂದಿಸುತ್ತಿದೆ. ಇಲ್ಲದಿದ್ದರೆ ಅದು ಅಸ್ತಿತ್ವದಲ್ಲಿಯೇ ಇರುತ್ತಿರಲಿಲ್ಲ. ಈ ಹಂತದಲ್ಲಿ 'ಚಾಂದಿ ಪ್ರಿಯ' ಹಾಗೂ 'ಬಸ್ತಿ ದೇವತಾ ಯಾದಮ್ಮ' ಸುರಭಿಯ ಅಳವಡಿಕೆಗಳು (ಸುರಭಿ ಲಕ್ಷಣಗಳು) ಹಾಗೂ ಸುರಭಿ ನಟಿಯರು ನಾಯಕಿಯ ಪಾತ್ರಗಳಲ್ಲಿ ಇದ್ದುದು ಸುರಭಿಗೆ ಹಾಗೂ ರಂಗಭೂಮಿಗೆ ಎರೆಡಕ್ಕೂ ಆರೋಗ್ಯಕರ ಚಿಹ್ನೆಯೇ ಆಗಿದೆ. ಸುರಭಿಯನ್ನು 'ಪ್ರತ್ಯೇಕ ವಿಶೇಷ ಅಸ್ತಿತ್ವ' ಎಂದು ಪರಿಗಣಿಸಿ 'ಸುರಭಿ ಸಂಪ್ರದಾಯ' ಅಥವಾ 'ಸುರಭಿಯ ಅಸ್ತಿತ್ವ' ಉಳಿಸಿಕೊಂಡು ಹೋಗಬೇಕೆನ್ನುವ ಮಿತಿಗಳನ್ನು ಒಡ್ಡುವುದು-ಅದರ ಬೆಳವಣಿಗೆಯ ಹಾಗೂ ಪ್ರತಿಭೆಗಳನ್ನು ಮುರುಟಿಸಿ ಸುರಭಿ ಒಂದು ಶ್ರೀಮಂತ ರಂಗಭೂಮಿಯ ರೂಪವಾಗಿ ಬೆಳೆಯುವುದನ್ನು ತಡೆದಂತೆ ಆಗುತ್ತದೆ.

(ಸುರಭಿ ವೆಂಕಟೇಶ್ವರ ನಾಟ್ಯ ಮಂಡಳಿಯ ಮುಖ್ಯಸ್ಥರಾದ ಆರ್ ನಾಗೇಶ್‌ರಾವ್ ರವರ ಸಹಕಾರವನ್ನು ನಾನು ನೆನೆಯುತ್ತೇನೆ. ಹಾಗೂ ತಂಡದ ಇತರ ಸದಸ್ಯರ ಸಹಕಾರ ಕೂಡಾ. ಮುಖ್ಯವಾಗಿ ಸ್ವಪ್ನ, ನಿರುಪಮ, ಇತರ ಹುಡುಗಿಯರು ಮತ್ತು ಸುರಭಿಯ ಎಲ್ಲಾ ಮಹಿಳೆಯರ ಸಹಕಾರವನ್ನೂ ನೆನೆಯುತ್ತೇನೆ.)

# ಹಗಲುಗನಸು

ಬಾಳ ಬಳ್ಳಿಯಲ್ಲಿ,

ಬೆಳಕು ಕತ್ತಲುಗಳ ನಡುವಿನಲ್ಲಿ,

ನಿನಗಾಗಿ ತಡಕಾಡಿದೆ

ನೀ ಸಿಗುವೆಯೆಂದು !

ಅಂದು ನಾ ತಿಳಿಯಲಿಲ್ಲ

ನೀನೊಂದು ಮರೀಚಿಕೆಯೆಂದು ನಾನಂದುಕೊಂಡೆ

ಹಗಲು ಇರುಳು ಪರಿತಪಿಸುವ

ನನ್ನ ಮನಕ್ಕೆ ನೀ ನೀಡುವೆ ಆಸರೆ ಎಂದು !

ನಿನ್ನ ಆ ಮೂರಕ್ಷರಕ್ಕೆ

ಹುಡುಕಾಡುವ ಜನಕ್ಕೆ ನೀ ನೀಡುವ ಉತ್ತರ

ಬರೀ ಬಿಸಿಲು ಮಳೆ

ಎನ್ನ ಬಾಳಿನ ಕತ್ತಲು ಕಳೆದು

ಬೆಳಕು ಹರಿಯಿತು !

ಇನ್ನೇನು ನೀನೆನಗೆ ದೊರೆತೆ ಎಂಬ

ಹುಚ್ಚು ಕಲ್ಪನೆ, ಹುಮಸ್ಸು

ನೂರಾರು ಆಸೆಗಳ ಹೊತ್ತು

ನಿನ್ನ ಅಂತರಾಳವ ಹೊಕ್ಕಾಗ

ತಿಳಿಯಿತೆನಗೆ ಇದೊಂದು ಹಗಲುಗನಸು ಎಂದು

- ಕವನ ದಿನೇಶ್

# ನೋಯುವುದಿಲ್ಲವೇ ಎಲೆ ?!

ನಿತ್ಯದಂತೆ ಕೇಳುತಿದೆ ಪರಪರ
ಕಡ್ಡಿ ಹಿಡಿಯಲಿ ಅಂಗಳ ಗುಡಿಸುವ ಸದ್ದು
ಇನ್ನೇನು ಉದಿಯಾಗುವ ಹೊತ್ತು
ನಿದ್ದೆ ಬಾರದು ದೂರತ್ತ ಹೊರಳಿ
ಹಾಸಿಗೆಯಲಿ ಹೊತ್ತು ಕಳೆಯುವುದಿಲ್ಲ
ಹಸೆ ಮಡಚಿ ಎಚ್ಚರದ ಹಜೆಹಾಕಿ
ಒಳಕೋಣೆಗಳ ದಾಟಿ ಸವರುತ್ತ
ನೊಂಪು ಸಾರಣೆ ಗೋಡೆ ಮಗು
ಮೈಗೆ ಎಣ್ಣೆ ಕಿಟ್ಟಿದ ಹಾಗೆ
ಚಾವಡಿಗೆ ಬರುತ್ತಾಳೆ.

ಅಗುಳಿ ತೆರೆದು ಗಿಳಿಬಾಗಿಲಲಿ ಮೊಗವಿಟ್ಟು
ದಣಿದ ತಾರೆ ಚಂದಿರಗೆ ಇರುಳ ಪಾಳಿ
ಮುಗಿಯಿತೇ ? ಹೋಗಿ ಬನ್ನಿ ತಲೆಯಾಡಿಸಿಸಿ
ಕವಳ ಜಗಿಯುತ್ತ ಹೊರ ಚಾವಡಿಯ
ಮೆಟ್ಟಲಿಳಿಯುತ್ತಾಳೆ

ಹಿರಿದು ಅಂಗಳ
ಕರೆಯಲ್ಲಿ ನಳನಳಿಸುತಿದೆ
ನೆಟ್ಟು ಬೆಳೆಸಿದ ಗಿಡ ಮತ
ಬೆಳ್ಳಿ ಸರಿಗೆಯ ಹಾಗೆ ಬೆನ್ನು
ಸರೂತ ಕತ್ತುದ್ದ ಮಾಡಿ
ಹೆಮ್ಮೆಯಲಿ ಕೇಳುತ್ತಾಳೆ - ಮುಗಿಲೆತ್ತರಕೆ ಬೆಳೆದಿರಾ ?

ಹತ್ತು ಮಕ್ಕಳ ತಾಯಿ
ಎಪ್ಪತರ ಒಂಟಿ ಮುದುಕಿ
ಅಂಗಳದ ತುಂಬ ಕಾಣುವಳು
ಮಕ್ಕಳು ಪುಟಾಣಿ ಹಜೆ
ರಂಗೋಲೆ ಕೇಳಿಸಿತು ಆಹಾ
ಕಿಲಕಿಲಾನಗೆ.

ಅಂಗಳದಿ ಎಂದೂ ಬೀಳಬಾರದು ಕಸ
ಅಡಿಯಲ್ಲಿ ಮರೆಯಾಗುವುದು ಹಜೆಯರಂಗೋಲೆ
ಏನಕೇನೋ ತಳಕು ಆತಂಕ ಅವ್ಯಕ್ತ ಭಯ
ಉಡುಗುತ್ತಾಳೆ ಅದಕಾಗಿ ದಿನದಿನವೂ
ಉದುರಿ ಬಿದ್ದ ಎಲೆಗಳ ಹೆಕ್ಕುತ್ತಾಳೆ
ಅಲ್ಲಲ್ಲಿ ಕಂಡ ಚೆನ್ನೆ ಬಿತ್ತುಗಳ
ಉಡಿಯಲ್ಲಿ ಕಟ್ಟಿ ನೆನೆಯುತ್ತಾಳೆ ರಜೆಗೆ ಬರುವ ಮೊಮ್ಮಕ್ಕಳ

ಬಳಸಿ ಜಬ್ಬಾದ ಹರಕು ಬುಟ್ಟಿ
ಗುಡಿಸಿ ಗುಡ್ಡೆ ಮಾಡಿಟ್ಟ ತರಗು ತುಂಬಿ
ಹಿಡಿಕೆಯ ಹುರಿಹಗ್ಗ ಹಿಡಿದು ಎಳೆಯುತ್ತಾಳೆ

ಬಚ್ಚಲೊಲೆಯಲ್ಲಿ ಬೂದಿಮುಚ್ಚಿದೆ ಕೆಂಡ
ಕೆದಕಿ ಮುಳಿ ಹುಲ್ಲುಸೋಗೆ ಬಾಯ್ಗಿಟ್ಟು
ಮಡಲು ಗರಿ ತರಗು ತುಂಬಿ ಪೂ ಪೂ ಊದುತ್ತಾಳೆ.
ಹೊಗೆ ಸುತ್ತಿ ಕೆಮ್ಮು ಹತ್ತಿದರೆ
ಸೊಕ್ಕೇ ಎಂದು ಗದರಿ ಕಣ್ಣನೊರೆಸುತ್ತಾಳೆ.

ಧಗಧಗ ಬೆಂಕಿ ಹಂಡೆ ತಳಸವರಿ
ಬಾಯ್ಕಿಸಿದು ಚಾಚಿದ ಕೆನ್ನಾಲಗೆಗೆ
ಹಿಡಿಹಿಡಿಯಾಗಿ ಕೈತುತ್ತು ತರಗು ನೀಡುತ್ತಾಳೆ.
ಕ್ಷಣ ಮಾತ್ರದಲಿ ಚಿರುಟಿ ಕರಕಾಗಿ ಕಂಡಾಗ ಬೂದಿ
ಕೇಳಿತ್ತು ಬೆನ್ನಿಗಾತ ಮಗು

ಅಜ್ಜೀ ನೋಯುವುದಿಲ್ಲವೇ ಎಲೆ ?
ನೆನಪಾಗಿ ದೊಡ್ಡಕೇ ನುಡಿಯುತ್ತಾಳೆ
ತೊಟ್ಟು ಕಳಚಿದ ಮೇಲೆ ನೋವಿಲ್ಲ

- ಶಾಲಿನಿ ಶ್ರೀನಿವಾಸ

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

ಸಂ.ಮಂಡಳಿ

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

ಮಾನಸ

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067